

# ಹಣತೆ



(ಖಾಸಗಿ ಪ್ರಸಾರಕ್ಕಾಗಿ ಮಾತ್ರ)

ಅಕ್ಟೋಬರ್ - ಡಿಸೆಂಬರ್ 2010 ಸಂಚಿಕೆ - 39

ಸಾಹಿತ್ಯ, ಸಂಸ್ಕೃತಿ, ಕಲೆ ಮತ್ತು ಕನ್ನಡ ಭಾಷೆಯ ಸಂವರ್ಧನೆಗೆ ಮೀಸಲಾದ
ಶಿವರಾಮ ಕಾರಂತ ವೇದಿಕೆ (ರಿ)ಯ ಮುಖಪತ್ರಿಕೆ



# ಶಿವರಾಮ ಕಾರಂತ ವೇದಿಕೆ (ರಿ)

ನಂ. 307, ಎರಡನೆಯ ವಿಭಾಗ, 17ನೇ ಅಡ್ಡರಸ್ತೆ, ರವೀಂದ್ರನಾಥ ಟಾಗೂರ್ ನಗರ,
ಬೆಂಗಳೂರು - 560 032. ದೂರವಾಣಿ : 080-23336822 / 9343766994
e-mail : pcchadaga@hotmail.com

## ಕಾರ್ಯಕಾರಿ ಸಮಿತಿ

| | | |
|---|---|---|
| 1. | ಗೌರವಾಧ್ಯಕ್ಷರು | ಶ್ರೀ ಎಸ್. ಆರ್. ವಿಜಯಶಂಕರ |
| 2. | ಅಧ್ಯಕ್ಷರು | ಶ್ರೀಮತಿ ರಾಧಾ ರಾಮಸ್ವಾಮಿ |
| 3. | ಉಪಾಧ್ಯಕ್ಷರು | ಶ್ರೀ ಬಿ. ವಿ. ಕೆದಿಲಾಯ |
| 4. | ಉಪಾಧ್ಯಕ್ಷರು | ಶ್ರೀಮತಿ ಶಾಂತಾ ಕುಮಾರಿ |
| 5. | ಕಾರ್ಯದರ್ಶಿ | ಶ್ರೀ ಪಾ. ಚಂದ್ರಶೇಖರ ಚಡಗ |
| 6. | ಕೋಶಾಧಿಕಾರಿ | ಡಾ|| ಆರ್.ಆರ್. ಪಾಂಗಾಳ್ |
| 7. | ಜೊತೆ ಕಾರ್ಯದರ್ಶಿ | ಶ್ರೀ ಡಿ. ಎಚ್. ವೀರಶೇಖರಸ್ವಾಮಿ |
| 8. | ಜೊತೆ ಕಾರ್ಯದರ್ಶಿ | ಶ್ರೀ ಇಂದಿರಾ ಶರಣ್ |

## ಸದಸ್ಯರು

1. ಕೆ. ಎನ್. ಶ್ರೀಕಂಠಯ್ಯ
2. ಶ್ರೀ ಸಾ. ರಾ. ವಾರಂಬಳ್ಳಿ
3. ಶ್ರೀ ಸೀತಾರಾಮ್, ಪಿ.ಎಚ್.ಡಿ.
4. ಶ್ರೀ ಎ. ಆರ್. ರಾಮಯ್ಯ
5. ಶ್ರೀ ರಮೇಶ್ ಗೋಟ
6. ಶ್ರೀ ಕೃಷ್ಣಪ್ರಸಾದ್ ಕೆ.
7. ಮಾಕನೂರು ಸುರೇಂದ್ರ
8. ಶ್ರೀಮತಿ ಚಿತ್ರಾ ವಿಠಲ್

'ಹಣತೆ' ಯ ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ
'ಹಣತೆ' ಯ ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

ಅಕ್ಟೋಬರ್ - ಡಿಸೆಂಬರ್ 2010 ಸಂಚಿಕೆ - 39

## ಪರಿವಿಡಿ

# ಸಂಪಾದಕೀಯ

ಪ್ರಿಯ ಓದುಗ,

ನಮ್ಮ ಜನವರಿ-ಮಾರ್ಚ್ 2010ರ ಸಂಚಿಕೆ ಹೊರಬಂದ ನಂತರ ಮುಂದಿನ ಸಂಚಿಕೆಯನ್ನು ಸಕಾಲದಲ್ಲಿ ತರಲುಬೇಕಾದ ಲೇಖನಗಳನ್ನೂ, ಜಾಹೀರಾತುಗಳನ್ನು ಒದಗಿಸಿಕೊಳ್ಳುವುದು ಅಸಾಧ್ಯವಾದುದರಿಂದ ಇನ್ನು ಮೇಲೆ 'ಹಣತೆ' ಯನ್ನು ಅನಿಯತಕಾಲಿಕವಾಗಿ ಹೊರತರಲು ನಿರ್ಧರಿಸಲಾಗಿದೆ. ಶಿವರಾಮ ಕಾರಂತರ 109ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಹೊರಬರುತ್ತಿರುವ ಈ ಸಂಚಿಕೆಯಲ್ಲಿ ಶಿವರಾಮ ಕಾರಂತರ ಕುರಿತು ಡಾ|| ಪುರುಷೋತ್ತಮ ಬಿಳಿಮಲೆಯವರು ದೆಹಲಿ ಕರ್ನಾಟಕ ಸಂಘಕ್ಕಾಗಿ ಬರೆದ "ಕನ್ನಡ ಸೃಜಿಸಿದ ಮಹಾವಿಸ್ಮಯ ಡಾ|| ಶಿವರಾಮ ಕಾರಂತ" ಎನ್ನುವ ಲೇಖನವನ್ನು ನಾವು ಬಳಸಿಕೊಂಡಿದ್ದೇವೆ. ಕನ್ನಡದ ಹಿರಿಯ ಲೇಖಕರಾದ ಡಾ. ಎಸ್.ಎಲ್. ಭೈರಪ್ಪನವರ ಇತ್ತೀಚಿಗಿನ ಕೃತಿ 'ಕವಲು' ಕನ್ನಡ ಸಾರಸ್ವತ ಪ್ರಪಂಚದಲ್ಲಿಯೇ ಅಪೂರ್ವವಾದ ಕುತೂಹಲ, ಕೋಲಾಹಲ ಹಾಗೂ ಆಸಕ್ತಿಯನ್ನುಂಟು ಮಾಡಿದೆ. ಕೃತಿಯ ಪರ ಹಾಗೂ ವಿರೋಧದ ಲೇಖನಗಳು ನಾಡಿನ ಪತ್ರಿಕೆಗಳಲ್ಲಿ ಬಂದಿವೆ. ಕೃತಿ ಮಾರಾಟದಲ್ಲಿ ದಾಖಲೆಯನ್ನು ನಿರ್ಮಿಸಿದೆ. ಕಾದಂಬರಿ ಒಂದು ಸೃಜನಶೀಲ ಪ್ರಕ್ರಿಯೆ. ಇಲ್ಲಿ ಬರುವ ಪಾತ್ರಗಳ ಮೂಲಕ ಕೃತಿಕಾರರ ವಿಚಾರಗಳು ಹೀಗೆಯೇ ಇವೆ ಅಥವಾ ಇರಬೇಕು ಎನ್ನುವ ವಾದವನ್ನು ಒಪ್ಪುವುದು ಕಷ್ಟ. ಸಾಹಿತ್ಯ ಸಮಾಜದ ಪ್ರತಿಬಿಂಬ. ಸಮಾಜದಲ್ಲಿರುವ ವಿಕೃತಿಗಳು ಸಾಹಿತ್ಯದಲ್ಲಿ ಬಿಂಬಿತವಾದಾಗ ಸಮಾಜದ ಮೇಲೆ ಒಳ್ಳೆಯ ಪರಿಣಾಮ ಬೀರಬೇಕು ಎನ್ನುವ ಆಶಯ ಜವಾಬ್ದಾರಿಯುತನಾದ ಲೇಖಕನಿಗೆ ಇದ್ದೇ ಇರುತ್ತದೆ. ಶಿವರಾಮ ಕಾರಂತರಂತಹ ಮಹಾನ್ ಲೇಖಕರು ವೇಶ್ಯಾ ಸಮಸ್ಯೆ, ವಿಷಮ ವಿವಾಹ ಮುಂತಾದ ಸಮಸ್ಯೆಗಳನ್ನು ಅತ್ಯಂತ ಕಲಾತ್ಮಕವಾಗಿ ತಮ್ಮ ಕಾದಂಬರಿಗಳಲ್ಲಿ ಮೂಡಿಸಿದ್ದಾರೆ. ಅವರ ಕೃತಿಗಳು ಎಂದೂ ಕಾಮ ಪ್ರಚೋದಕವಾಗಿರಲಿಲ್ಲ ಭೈರಪ್ಪನವರ 'ಕವಲು' ಕೃತಿ ಒಂದು ಮಹತ್ವದ ಕೃತಿಯೆಂಬ ಅಭಿಪ್ರಾಯವನ್ನು ನಮ್ಮ ಸಂಪಾದಕರಾದ ಶ್ರೀ ಬಿ.ವಿ. ಕೆದಿಲಾಯರು ಈ ಸಂಚಿಕೆಯ "ಭೈರಪ್ಪನವರ ಕವಲು" ಲೇಖನದಲ್ಲಿ ಪ್ರತಿಪಾದಿಸಿದ್ದಾರೆ. ಈ ಕುರಿತು ಭಿನ್ನವಾದ ಅಭಿಪ್ರಾಯವುಳ್ಳ ಲೇಖನಗಳಿಗೂ 'ಹಣತೆ'ಯಲ್ಲಿ ಸ್ವಾಗತವಿದೆ. ಕಾರಂತರ "ಮೂಕಜ್ಜಿಯ ಕನಸುಗಳು" ಕೃತಿಯನ್ನು ಜನ ಬೇರೆ ಬೇರೆಯಾಗಿ ಅರ್ಥೈಸಿದ್ದಾರೆ. ಅವರ ಎಲ್ಲಾ ಮಹತ್ವಪೂರ್ಣ ಕೃತಿಗಳ ಕುರಿತೂ ಅಸೂಯಾಪರರು ನಿಂದನೆಯಿಂದ ಕೂಡಿದ ವಿಮರ್ಶೆ ಮಾಡಿದ್ದಾರೆ. ಇಂತಹ ನಿಂದನೆಗಳು ಕಾಲಗರ್ಭದಲ್ಲಿ, ಅಡಗಿ ಕಾರಂತರು ಇಂದಿಗೂ ಕನ್ನಡ ಸಾರಸ್ವತ ಪ್ರಪಂಚದಲ್ಲಿ ಪ್ರಖರಸೂರ್ಯನಂತೆ ದೇದೀಪ್ಯಮಾನರಾಗಿದ್ದಾರೆ.

ಶಿವರಾಮ ಕಾರಂತ ವೇದಿಕೆಯ ಮಹಾಸಭೆಯು 8-8-10ರಂದು ನಡೆಯಿತು. ಅಂದಿನ ಸಭೆಯಲ್ಲಿ ನೂತನ ಪದಾಧಿಕಾರಿಗಳ ಆಯ್ಕೆ ಅವಿರೋಧವಾಗಿ ನಡೆಯಿತು. ಅಂದು ಡಾ. ಕೆ. ಎನ್. ಗಣೇಶಯ್ಯನವರ ಕಥೆ ಆಧಾರಿತ ಚಾರಿತ್ರಿಕ ರೋಮಾಂಚಕ ನಾಟಕ ಶಾಲಭಂಜಿಕೆಯನ್ನು ತರಳಬಾಳು ಸಭಾಂಗಣದಲ್ಲಿ ಅಂತರಂಗ ತಂಡದವರು ಅಭಿನಯಿಸಿ ಜನರಿಂದ ಮೆಚ್ಚುಗೆಯನ್ನು ಪಡೆದರು. ತರಳಬಾಳು ಕೇಂದ್ರದಲ್ಲಿ ಎಡೆಬಿಡದೆ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತಿವೆ. ಇವೆಲ್ಲ ಚಟುವಟಿಕೆಗಳಿಗೆ ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳ ಆಶೀರ್ವಾದ ಹಾಗೂ ಡಾ|| ಸಿದ್ಧಯ್ಯನವರ ವಿಶಾಲ ಹೃದಯದ ಸಹಕಾರವೇ ಕಾರಣ. ಈ ಕೇಂದ್ರದ ಎರಡನೆಯ ಮಹಡಿಯಲ್ಲಿರುವ ತರಳಬಾಳು ಗ್ರಂಥಾಲಯದಲ್ಲಿ ನಡೆಯುತ್ತಿರುವ ಸಾಹಿತ್ಯಿಕ ಚಟುವಟಿಕೆಗಳು ಗ್ರಂಥಾಲಯವನ್ನು ಜನ ಹೆಚ್ಚು ಹೆಚ್ಚು ಉಪಯೋಗಿಸುವಂತೆ ಆಗಲಿ, ಇಲ್ಲಿ ಒಂದು ಸಂಶೋಧನಾ ಕೇಂದ್ರ ರೂಪುಗೊಳ್ಳಲಿ ಎಂದು ಆಶಿಸಿ ನನ್ನ ನುಡಿಗಳನ್ನು ಕೊನೆಗೊಳಿಸುತ್ತೇನೆ.

*ಪ್ರಾ. ಚಂದ್ರಶೇಖರ ಚಡಗ*
ವ್ಯವಸ್ಥಾಪಕ ಸಂಪಾದಕ

ವ್ಯಂಗ್ಯಕವನ

# ಧರ್ಮದ ಅಮಲು

- ಪ್ರಾ. ಚಂದ್ರಶೇಖರ ಚಡಗ

ಬಂತಿದೋ ಚುನಾವಣೆ
ನಾಡಿನುದ್ದಕ್ಕೂ ಚಿತಾವಣೆ
ಬಡವರ ಬವಣೆ
ಮರೆಯಲು ಸಿದ್ಧವಾಗಿದೆ ಅಮಲು

ಧರ್ಮದ ಅಮಲು
ಕೈಯಲಿ ಪಕ್ಷದ ಝಂಡಾ
ಕುಡಿಯಲು ಹೆಂಡ
ಧರ್ಮಕ್ಕೆ ಅಮಲು
ತೆಗೆದುಕೋ ಬಡವಾ
ನೀರೆಯರು ಕಾದಿಹರು
ಸೀರೆಗಾಗಿ, ನೀರಿಗಾಗಿ

ಕುಡಿ, ನೀರೇ ಏಕೆ ಬೇಕು ?
ಸೇಂದಿಯೂ ಸಾಕು
ನಿನ್ನ ಬದುಕು
ಎಂದೆಂದಿಗೂ ಹೀಗೆ
ನೀ ನಡೆದ ಹಾದಿಯೇ ಹಾಗೆ

ವಿಧಾನಸೌಧದ ಗಾಡಿ
ಮುಳ್ಳಿನ ಹಾಸಿಗೆ ನೋಡು
ನೀ ಅಮಲು ಕುಡಿದು ಸತ್ತರೆ
ಒಂದೆರಡು ಲಕ್ಷ ಕೊಟ್ಟೇವು
ನಾಡಿನ ಬೊಕ್ಕಸದಿಂದ

ವಿರೋಧಿ ರಕ್ಕಸರ ಬೊಬ್ಬೆ
ಅಬ್ಬಾ, ನನಗೇಕೆ ಬೇಕು ರಾಜಕೀಯ
ಆದರೂ, ನನ್ನ ಸ್ವಕೀಯರ
(ನಿನ್ನನ್ನೂ ಸೇರಿ)
ಹಿತರಕ್ಷಣೆ ಆಗಬೇಕಲ್ಲಾ
ಆ ಮುಲ್ಲಾ, ಈ ಬಾಬಾ
ಎಲ್ಲರಿಗೂ ಸಲಾಮು ಹಾಕುತ್ತಾ
ನಡೆಸಲೇಬೇಕು ಕಸರತ್ತು
ರಾಜಕೀಯದಲಿ ಎಲ್ಲಿದೆ ನಿಯತ್ತು
ಇದು ನಿನಗೂ ಗೊತ್ತು.

ಮಹಾರಾಯಾ, ಗುಟ್ಟಾಗಿ ಹೇಳುವೆನು ಕೇಳು
ನಾ ಹೇಳಿದಂತೆ ನೀ ಬಾಳು
ನಾ ಮಾಡಿದಂತೆ ನೀ ಮಾಡಬೇಡಪ್ಪಾ
ನನ್ನದು ನನಗೆ
ನಿನ್ನದು ನಿನಗೆ.

ಶಿಕ್ಷಣ ಎಂದರೇನು ? ಪುಸ್ತಕ ಪಾಂಡಿತ್ಯವೇ ? ಅಲ್ಲ. ಹಲವು ವಿಧದ ಮಾಹಿತಿ ಸಂಗ್ರಹಣವೇ ? ಅಲ್ಲ. ಯಾವ ತರಬೇತಿಯ ಮೂಲಕ ಇಚ್ಛಾಶಕ್ತಿಯ ಪ್ರವಾಹ ಮತ್ತು ಅಭಿವ್ಯಕ್ತಿಗಳು ಸ್ವನಿಯಂತ್ರಣಕ್ಕೊಳಗಾಗಿ ಪರಿಣಾಮಕಾರಿಯಾಗುವುವೋ ಅದೇ ಶಿಕ್ಷಣ.

- ಸ್ವಾಮಿ ವಿವೇಕಾನಂದ

ಕೃತಿ ಪರಿಚಯ

# ಭೈರಪ್ಪನವರ 'ಕವಲು'

*- ಬಿ.ವಿ. ಕೆದಿಲಾಯ*

ಡಾ. ಎಸ್.ಎಲ್. ಭೈರಪ್ಪನವರ ಹೊಸ ಕಾದಂಬರಿ 'ಕವಲು' ಈಗಾಗಲೇ ಅನೇಕ ವಾದ-ವಿವಾದಗಳನ್ನೂ ತೀಕ್ಷ್ಣ ಪ್ರತಿಕ್ರಿಯೆಗಳನ್ನೂ, ಮಾರಾಟದಲ್ಲಿ ಹೊಸ ದಾಖಲೆಯನ್ನೂ ಸೃಷ್ಟಿಸಿರುವ ವಿಶಿಷ್ಟ ಕೃತಿ. ಇದೊಂದು ಸಮಕಾಲೀನ ಭಾರತೀಯ ಜೀವನದ ಕೆಲವು ನಗ್ನ ಸತ್ಯಗಳ ಸಮರ್ಥ ನಿರೂಪಣೆ ಎಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಇನ್ನು ಕೆಲವರು 'ಸ್ತ್ರೀ ವಿರೋಧಿ ವಕಾಲತ್ತು' ಎಂದು ಟೀಕಿಸಿದ್ದಾರೆ. ಭೈರಪ್ಪನವರು ರಾಷ್ಟ್ರಮಟ್ಟದ ಕಾದಂಬರಿಕಾರರಾಗಿ ಪ್ರಸಿದ್ಧರಾಗಿದ್ದು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿರುವುದರಿಂದ ಅವರ ಹೊಸಕೃತಿಯೊಂದು ಬಂದಾಗ ಸಾಹಿತ್ಯಪ್ರಿಯರು ಅದನ್ನು ಕುತೂಹಲದಿಂದ ಓದುವುದು ಹಾಗೂ ಚರ್ಚಿಸುವುದು ಸಹಜ.

'ಕವಲು' ಕಾದಂಬರಿಯಲ್ಲಿ ಭೈರಪ್ಪನವರು ಆಧುನಿಕ ಭಾರತದ ಸುಶಿಕ್ಷಿತ, ಮಧ್ಯಮ / ಮೇಲು ಮಧ್ಯಮ ವರ್ಗದ ಜನರ ಜೀವನದಲ್ಲಿ ಹೆಚ್ಚುತ್ತಿರುವ ದಾಂಪತ್ಯ ವಿರಸ, ವಿಚ್ಛೇದ, ಲೈಂಗಿಕ ಸ್ವಚ್ಛಂದತೆ, ಅಂತರ್ಲಿಂಗೀಯ ಶೋಷಣೆ, ಮಹಿಳಾ ಸಬಲೀಕರಣ, ಕಾನೂನು ಮತ್ತು ನ್ಯಾಯ-ಈ ವಸ್ತುಗಳನ್ನು ಕೇಂದ್ರವಾಗಿಟ್ಟುಕೊಂಡು ಸತ್ವಪೂರ್ಣವೂ, ವಾಚನೀಯವೂ ಆದ ಕಥೆಯನ್ನು ಹೆಣೆದಿದ್ದಾರೆ. ಸಲೀಸಾಗಿ ಓದಿಸಿಕೊಂಡು ಹೋಗುವ ನೇರ ಕಥನ ತಂತ್ರದಲ್ಲಿಯೇ ಜೀವನದ ವೈವಿಧ್ಯಮಯ ಅನುಭವಗಳನ್ನೂ ಸೂಕ್ಷ್ಮ ಚಿಂತನೆಗಳನ್ನೂ ಓದುಗರ ಬುದ್ಧಿ-ಭಾವಗಳನ್ನು ಕಲಕುವಂತೆ, ಕಾಡುವಂತೆ ವ್ಯಕ್ತಪಡಿಸಿದ್ದಾರೆ.

ಸ್ಥೂಲವಾಗಿ ಹೇಳುವುದಾದರೆ 'ಕವಲು' ಕಾದಂಬರಿ ಜಯಕುಮಾರ - ಮಂಗಳೆ, ವಿನಯ ಚಂದ್ರ - ಇಳಾ ಮತ್ತು ನಚಿಕೇತ-ಟ್ರೇಸಿ ಎಂಬ ಮೂರು ಜೋಡಿಗಳ ವಿಷಮ ದಾಂಪತ್ಯ ಮತ್ತು ವಿಚ್ಛೇದನಗಳ ಕಥೆಯಾಗಿದೆ. ಜಯಕುಮಾರ ಸೌಮ್ಯ ಸ್ವಭಾವದ, ಕೊಂಚ ದುರ್ಬಲ ಎನ್ನಬಹುದಾದ ಸುಶಿಕ್ಷಿತ ತರುಣ. ಆತ ಸಮರ್ಥೆಯೂ, ಅನುಕೂಲೆಯೂ ಆದ ಪತ್ನಿ ವೈಜಯಂತಿಯ ಸಹಕಾರದಿಂದ ಸ್ವಂತ ಉದ್ಯಮವನ್ನು ಕಟ್ಟುವುದರಲ್ಲಿ ಯಶಸ್ವಿಯಾಗುತ್ತಾನೆ. ಆದರೆ ಆಕೆ ಆಕಸ್ಮಿಕ ಅಪಘಾತದಲ್ಲಿ

ಮೃತಳಾಗುತ್ತಾಳೆ. ಅವಳಲ್ಲಿ ಅವನು ಪಡೆದ ಮಗಳು ವಿಕಲಚೇತನೆಯಾಗಿರುತ್ತಾಳೆ. ಏಕಾಕಿಯಾದ ಜಯಕುಮಾರ ಕ್ರಮೇಣ ತನ್ನ ಆಪ್ತಕಾರ್ಯದರ್ಶಿ ಮಂಗಳೆಯೊಡನೆ ಆಕರ್ಷಿತನಾಗುತ್ತಾನೆ. ಆಕೆ ಎಂ.ಎ. ಪದವೀಧರೆ ಚಾಣಾಕ್ಷೆ. ಕಾನೂನಿನ ಒತ್ತಡ ತಂದು ಅವನನ್ನು ಮದುವೆಯಾಗುತ್ತಾಳೆ. ಅವಳ ಮಹತ್ವಾಕಾಂಕ್ಷೆ, ಅಧಿಕಾರದಾಹ, ಸ್ವೇಚ್ಛಾಚಾರಗಳಿಂದ ಜಯಕುಮಾರ ಮಾನಸಿಕ ಹಿಂಸೆಗೊಳಗಾಗುತ್ತಾನೆ. ಅವಳಿಗೊಂದು ಮಗು (ತೇಜ) ಹುಟ್ಟಿದ ಮೇಲಂತೂ ದಾಂಪತ್ಯವಿರಸ ಉಲ್ಬಣಿಸುತ್ತದೆ. ಒಂದೆರಡು ದುರ್ಬಲ ಕ್ಷಣಗಳಲ್ಲಿ ಆತ ಮಾಡಿದ ತಪ್ಪುಗಳಿಂದಾಗಿ ಜೈಲುವಾಸವನ್ನೂ ಅನುಭವಿಸಬೇಕಾಗುತ್ತದೆ. ಕಾನೂನಿನ ಬಲದಿಂದ ಮಂಗಳೆ ಅವನಿಂದ ವಿಚ್ಛೇದವನ್ನು ಪಡೆದುಕೊಳ್ಳುವುದರ ಜತೆಗೆ ಅವನ ಆಸ್ತಿಯನ್ನು ಕಿತ್ತುಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಾಳೆ. ಜಯಕುಮಾರನ ಉದ್ಯಮ ಕುಸಿದು ಬೀಳುತ್ತದೆ. ಕೆಲಕಾಲದ ಬಳಿಕ ದೂರವಾಗಿದ್ದ ಅವನ ತಾಯಿ, ಅಳಿಯ, ಮಗಳ ಪುನರ್ಮಿಲನದಿಂದ ಅವನ ಬದುಕಿನಲ್ಲಿ ಒಂದಿಷ್ಟು ಬೆಳಕು ಮೂಡುತ್ತದೆ. ಇತ್ತ ಮಂಗಳೆಗೆ ಆರ್ಥಿಕ ಭದ್ರತೆ ದೊರೆತರೂ ನೆಮ್ಮದಿಯಿಲ್ಲ. ಅವಳ ಹಳೆಯ ಪ್ರೇಮಿ ಪ್ರಭಾಕರ ಅವಳನ್ನು ಕೆಲಕಾಲ ಬಳಸಿ ಕೈಬಿಡುತ್ತಾನೆ. ಮಗ ತೇಜು ಸಾಮಾಜಿಕ ತಿರಸ್ಕಾರವನ್ನನುಭವಿಸಬೇಕಾಗುತ್ತದೆ.

ವಿನಯಚಂದ್ರ ಬಹು ರಾಷ್ಟ್ರೀಯ ಕಂಪನಿಯೊಂದರಲ್ಲಿ ದೊಡ್ಡ ಅಧಿಕಾರಿ. ಗಟ್ಟಿ ಮನಸ್ಸಿನ, ಚಾಣಾಕ್ಷ, ಮಹತ್ವಾಕಾಂಕ್ಷಿ ಯುವಕ, ಆತನ ಪತ್ನಿ ಇಳಾ ಆಕ್ಸ್‌ಫರ್ಡ್‌ನಲ್ಲಿ ಓದಿದ, ಸ್ಥಳೀಯ ವಿಶ್ವವಿದ್ಯಾಲಯದಲ್ಲಿ ರೀಡರ್. ಸ್ತ್ರೀವಾದದ ಪ್ರಬಲ ಸಮರ್ಥಕಿಯಾದ ದಿಟ್ಟ ಹೆಣ್ಣು, ಇವರ ಮಗಳು ಸುಜಯಾ. ವಿನಯಚಂದ್ರ ಪ್ರಮೋಶನ್ ಪಡೆದು ದಿಲ್ಲಿಗೆ ಹೋಗುತ್ತಾನೆ. ಇಳಾ ಅವನ ಜತೆ ಹೋಗಲು ನಿರಾಕರಿಸಿ ಬೆಂಗಳೂರಿನಲ್ಲೇ ಉಳಿಯುತ್ತಾಳೆ. ಅವರ ನಡುವಿನ ಸಂಬಂಧ ಈಗಾಗಲೇ ಹಳಸಿದೆ. ವಿನಯಚಂದ್ರ ದಿಲ್ಲಿಗೆ ಹೋದ ಬಳಿಕ ಅವಳ ಸಂಪರ್ಕವನ್ನೇ ಸಂಪೂರ್ಣವಾಗಿ ತ್ಯಜಿಸುತ್ತಾನೆ. ಆದರೆ ಕೆಲವು ಉಪಾಯಗಳಿಂದ ಮಗಳ ಪ್ರೀತಿಯನ್ನು ಉಳಿಸಿಕೊಳ್ಳುತ್ತಾನೆ. ಈ ಮಧ್ಯೆ ದೊರೆರಾಜ್ ಎಂಬ ರಸಿಕ ಮಂತ್ರಿ ಇಳಾಳನ್ನು ಆಕರ್ಷಿಸುತ್ತಾನೆ. ಆಕೆ ಸ್ವಲ್ಪಕಾಲ ಅವನೊಡನೆ ಸುಖಿಸಿದರೂ ಅವನು ತನ್ನ ಪತ್ನಿಗೆ ವಿಚ್ಛೇದ ನೀಡಿ ತನ್ನನ್ನು ಮದುವೆಯಾಗಬೇಕೆಂದು ಒತ್ತಾಯಿಸಿ, ಸೋತು

ತಿರಸ್ಕೃತಳಾಗುತ್ತಾಳೆ. ವಿನಯಚಂದ್ರ ಅವಳ ವ್ಯಭಿಚಾರವನ್ನು ಪತ್ತೆಮಾಡಿ, ಅದನ್ನು ಬಳಸಿಕೊಂಡು ಸುಲಭವಾಗಿ ವಿಚ್ಛೇದನ ಪಡೆದುಕೊಳ್ಳುತ್ತಾನೆ. ತಾಯಿಯ ವರ್ತನೆಯಿಂದ ಬೇಸರಗೊಂಡ ಮಗಳು ಅವಳನ್ನು ಬಿಟ್ಟು ಹಾಸ್ಟೆಲ್ ಸೇರಿಕೊಳ್ಳುತ್ತಾಳೆ.

ಇನ್ನು, ನಚಿಕೇತನ ಪ್ರಕರಣ ತುಂಬಾ ಸಂಕ್ಷಿಪ್ತವಾಗಿ ಬರುತ್ತದೆ. ಆತ ಅಮೇರಿಕದಲ್ಲಿ ಸಾಫ್ಟ್‌ವೇರ್ ಇಂಜಿನೀಯರಾಗಿದ್ದು ಸ್ವಲ್ಪಕಾಲ ಲಿಂಡ್ಸಿ ಎಂಬ ತರುಣಿಯೊಂದಿಗೆ 'ಲಿವ್-ಇನ್' ಸಂಬಂಧದಲ್ಲಿರುತ್ತಾನೆ. ಆದರೆ ಆಕೆ ಅವನನ್ನು ಬಿಟ್ಟು ಇನ್ನೊಬ್ಬನ ಜತೆ ಹೋದಾಗ, ಟ್ರೇಸಿ ಎಂಬ, ಆಗಲೇ ಇಬ್ಬರು ಮಕ್ಕಳಿರುವ ಹೆಣ್ಣನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಆಕೆ ಚಾಣಾಕ್ಷೆ. ಅವಳಿಗೆ ಬೇಕಾಗಿರುವುದು ನಚಿಕೇತನ ಆಸ್ತಿ ಮತ್ತು ಆದಾಯ. ಹಾಗಾಗಿ ಅವರ ದಾಂಪತ್ಯ ವಿಫಲವಾಗಿ ವಿಚ್ಛೇದನದಲ್ಲಿ ಪರ್ಯವಸಾನಗೊಳ್ಳುತ್ತದೆ. ಕಾನೂನುಗಳನ್ನು ಬಳಸಿಕೊಂಡು ಟ್ರೇಸಿ ನಚಿಕೇತನ ಆಸ್ತಿ, ಆದಾಯಗಳನ್ನು ದೋಚಿಕೊಳ್ಳುತ್ತಾಳೆ. ಭಗ್ನ ಹೃದಯಿಯಾಗಿ, ಆರ್ಥಿಕವಾಗಿ ದಿವಾಳಿಯಾದ ಆತ ಕೆಲಸಮಯದ ಬಳಿಕ ಸ್ವದೇಶಕ್ಕೆ ಮರಳುತ್ತಾನೆ. ಇಲ್ಲಿ ಉದ್ಯೋಗ ಪಡೆದು ವಿಕಲ ಚೇತನೆಯಾದ ಮಾವನ ಮಗಳನ್ನು ಮದುವೆಯಾಗುತ್ತಾನೆ.

ಜಯಕುಮಾರ, ನಚಿಕೇತರ ಪ್ರಕರಣಗಳಲ್ಲಿ ಕಾನೂನಿನ ಬಲದಿಂದ ಮಹಿಳೆಯೇ ಪುರುಷನನ್ನು ಶೋಷಿಸುತ್ತಾಳೆ. ವಿನಯ ಚಂದ್ರನ ಪ್ರಕರಣದಲ್ಲಿ ಪುರುಷನೇ ಕಾನೂನಿನ ಪ್ರಯೋಜನ ಪಡೆದುಕೊಳ್ಳುತ್ತಾನೆ. ಕಾನೂನಿನಿಂದ ಎಲ್ಲ ಸಂದರ್ಭಗಳಲ್ಲೂ ನ್ಯಾಯ ದೊರೆಯುತ್ತದೆಂಬ ಗ್ಯಾರಂಟಿ ಇಲ್ಲ. ನ್ಯಾಯಕ್ಕಾಗಿ ರಚಿತವಾದ ಕಾನೂನಿನಿಂದಲೇ ಅನ್ಯಾಯವೂ ಆಗುವ ಸಾಧ್ಯತೆ ಇದೆ. ಶೋಷಣೆಯನ್ನು ಗಂಡೂ ಮಾಡಬಹುದು, ಹೆಣ್ಣೂ ಮಾಡಬಹುದು. ಅದು ಆಯಾ ವ್ಯಕ್ತಿಯ ಸ್ವಭಾವ, ಸಾಮರ್ಥ್ಯ ಮತ್ತು ಸನ್ನಿವೇಶಗಳನ್ನು ಅವಲಂಬಿಸಿದೆ ಎನ್ನುವ ಅಭಿಪ್ರಾಯವನ್ನು ಕಾದಂಬರಿ ಸೂಚಿಸುತ್ತದೆ. ಇಲ್ಲಿನ ಮೂರು ಪ್ರಮುಖ ಸ್ತ್ರೀಪಾತ್ರಗಳು ನಿಷ್ಠುರವಾಗಿ ಚಿತ್ರಿತವಾಗಿರುವುದರಿಂದ ಸ್ತ್ರೀವಾದಿಗಳ ಟೀಕೆಗೆ ಲೇಖಕರು ಗುರಿಯಾಗುವುದು ಸಹಜ. ಆದರೆ ಭೈರಪ್ಪನವರು ಕಾದಂಬರಿಯ ಎಲ್ಲ ಪುರುಷ ಪಾತ್ರಗಳಲ್ಲೂ ಸಾಕಷ್ಟು ದೋಷ, ದೌರ್ಬಲ್ಯ ಸಂದರ್ಭ ಸಾಧಕತನ ಹಾಗೂ ಶೋಷಣೆಯ ಪ್ರವೃತ್ತಿಗಳಿರುವುದನ್ನು ತೆರೆದು ತೋರಿಸಿದ್ದಾರೆ ಎನ್ನುವುದನ್ನು ಮರೆಯುವಂತಿಲ್ಲ. ಪುರುಷ ಪ್ರಧಾನವಾಗಿರುವ ಇಂದಿನ ಪ್ರಪಂಚದಲ್ಲಿ ಸ್ತ್ರೀಯರು ಶೋಷಣೆಗೆ ಗುರಿಯಾಗಿರುವುದು ವಾಸ್ತವವೇ ಆದರೂ, ಈ ವಾಸ್ತವಕ್ಕೆ

ವಿರುದ್ಧವಾದ ಇನ್ನೊಂದು ಮುಖವೂ ಇದೆ ಎನ್ನುವುದನ್ನು ಲೇಖಕರು ಅನಾವರಣ ಮಾಡಿದ್ದಾರೆ. ಸುಶಿಕ್ಷಿತ ದಂಪತಿಗಳಲ್ಲಿ ಹೆಚ್ಚುತ್ತಿರುವ ವಿಚ್ಛೇದದ ಪ್ರಕರಣಗಳು (ಬೆಂಗಳೂರಿನಲ್ಲೇ 15,000 ಪ್ರಕರಣಗಳು ಇತ್ಯರ್ಥವಾಗದೆ ಉಳಿದಿವೆ ಎಂಬುದು ಇತ್ತೀಚೆಗೆ ಪತ್ರಿಕೆಯಲ್ಲಿ ಬಂದಿರುವ ಸುದ್ದಿ.) ಈ ಸಮಸ್ಯೆ ಎಷ್ಟು ಸಮಕಾಲೀನವಾಗಿದೆ ಎನ್ನುವುದನ್ನು ಎತ್ತಿ ತೋರಿಸುತ್ತದೆ. ಈ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ 'ಕವಲು' ಒಂದು ಮಹತ್ವದ ಕಾದಂಬರಿ ಎಂದು ಹೇಳಬಹುದು. ಇನ್ನೂ ನೂರಾರು ಪುಟಗಳಷ್ಟು ವಿಸ್ತರಿಸಲು ಸಾಧ್ಯವಿದ್ದರೂ, 300 ಪುಟಗಳ ಸಾಂದ್ರ ನಿರೂಪಣೆಯಲ್ಲಿ ಕಾದಂಬರಿಯ ಶಿಲ್ಪವನ್ನು ಅಚ್ಚುಕಟ್ಟಾಗಿ ಕಡೆದಿರುವ ಲೇಖಕರ ಕಥನ ಕೌಶಲ ಕೃತಿಯನ್ನು ಮತ್ತಷ್ಟು ವಾಚನೀಯವಾಗಿಸಿದೆ.



## ಕಾರಂತ ಉವಾಚ

ಜೀವನದ ಸುಖ ದುಃಖಗಳ ಪ್ರದರ್ಶನಕ್ಕೆ ನೃತ್ಯವು ನೆರವಾಗಬಲ್ಲ ಶಕ್ತಿ.

* * *

ಕಲೆಗೂ ಸಂಸ್ಕಾರಕ್ಕೂ ಸಂಬಂಧವೇನು ಎಂದು ಕೇಳಿದರೆ, ಒಂದು ಜೀವವಾದರೆ ಇನ್ನೊಂದು ಭಾವ ಎನ್ನಬೇಕಾಗುತ್ತದೆ.

* * *

ಕಲೆಯನ್ನು ತಿಳಿಯುವುದಕ್ಕೂ ತಕ್ಕ ಸಂಸ್ಕಾರ ಬೇಕು. ಪರಿಪಾಠಬೇಕು.

* * *

ಸಮಾಜದಲ್ಲಿ ಯಾರೂ ಅಸಹಾಯಶೂರರಿಲ್ಲ. ಪ್ರತಿಯೊಬ್ಬನೂ ಪರಾಧೀನ. ಅನ್ಯೋನ್ಯ ಅವಲಂಬನೆಯೇ ಸಮಾಜ ಜೀವಿಯ ಗುಣ.

* * *

ಬದುಕಿನಲ್ಲಿ ಪರಮಾವಧಿಯ ತೃಪ್ತಿಯನ್ನು ಕೊಡಬಲ್ಲದ್ದು ಒಂದೇ ಒಂದು. ತಾನು ಸರಿಯಾಗಿ ನಡೆದಿದ್ದೇನೆ ಎಂಬ ಆತ್ಮವಿಶ್ವಾಸ.

ಸಣ್ಣಕಥೆ

# ಅಜಗರ

*ಡಾ|| ಆರ್.ಆರ್. ಪಾಂಗಾಳ್*

"ಏನು ಡಾಕ್ಟ್ರೇ ! ಬೆಳಿಗ್ಗೆನೇ ಬರಹೇಳಿದ್ದೆ. ಈಗ ಸಾಯಂಕಾಲ ಬರ್‍ತ್ತೀದ್ದೀರಲ್ಲಾ !" ಭುಜಂಗಯ್ಯನವರು ಅಂದ ಮಾತಿಗೆ ನಗುತ್ತಾ ನಾನು, "ಈಗ್ಲಾದ್ರೂ ಬಂದ್ನಲ್ಲ, ನಾಳೆ ಬಂದಿದ್ರೆ ?" ಇಷ್ಟು ವರ್ಷಗಳ ಅವರ ಪರಿಚಯ, ಅವರ ವಯಸ್ಸು ಇದಕ್ಕಿಂತ ಹೆಚ್ಚಾಗಿ ಮಾತನಾಡಲು ನನಗೆ ಆಸ್ಪದ ಮಾಡಿಕೊಡಲಿಲ್ಲ. ಇನ್ಯಾರಾದರೋ ಆಗಿದ್ದಲ್ಲಿ ಹೊರಗಿನಿಂದಿಲ್ಲವಾದರೂ ಮನಸ್ಸಿನೊಳಗೆ, 'ಭಾನುವಾರ ಒಂದು ದಿನಾನೂ ಮನೆಯಲ್ಲಿ ನನ್ನ ಕೆಲ್ಸ ಮಾಡ್ಕೊಂಡು ಇರಕ್ಕೂ ಬಿಡಲ್ಲ. ಕರೆದಾಗೆಲ್ಲಾ ಓಡ್ಕೊಂಡು ಬರೋದಕ್ಕೆ ಮನೇ ಸರ್ವೆಂಟಾ ? ಅಂದುಕೊಂಡೇನು. ಆದ್ದರಿದಲೇ ಮುಖವಾಡ ಧರಿಸಿ ನಟಿಸುವ ನಟ ನಾನು.

"ಹೋಗ್ಲಿ ಬಿಡಿ. ಕೂತ್ಕೊಳ್ಳಿ, ನಿಮ್ಗೊಂದು ಸಮಾಚಾರ ಹೇಳ್ಬೇಕು. 'ಮಾಲಾ, ದಾಕ್ಟ್ರಿಗೂ ನಂಗೂ ಕಾಫಿ ತಗೊಂಬಾಮ್ಮ, ಸಾರಿ, ತಗೊಂಬರ್‍ತ್ತಿಯೇನಮ್ಮಾ' ನೋಡಿ ಡಾಕ್ಟ್ರೇ ಈ ಹುಡ್ಗಿ ಒಂದು ಈ ಒಂಟಿ ಜೀವಕ್ಕೆ ಗಂಟು ಬಿದ್ದಿದೆ."

ಯಾವ ತೊಂದರೆಯೂ ಇಲ್ಲದೆ ಒಂದು ಸಮಾಚಾರ ಹೇಳಲಿಕ್ಕೆ ನನ್ನನ್ನು ಅರ್ಜೆಂಟಾಗಿ ಬೆಳಿಗ್ಗೆ ಬರ ಹೇಳಿದರಲ್ಲಾ ನನಗೂ ತುಸು ಇರಿಸು ಮುರಿಸು ಆಗುತ್ತದೆ.

ಎಂಬತ್ತೈದು ವರ್ಷಗಳ ಭುಜಂಗಯ್ಯ ಕಾಫಿ ಹೀರುತ್ತಾ "ನಿಮ್ಗೆ ನಹುಷನ ಕತೆ ಗೊತ್ತಾ?"

"ನಂಗೆ ಆ ಹೆಸ್ರಿನವ್ರು ಯಾರೂ ಪರಿಚಯ ಇಲ್ವಲ್ಲಾ !"

"ರೀ ಮಹಾಭಾರತದ ನಹುಷ....." ನಾನು "ಓ......" ಅಂದಾಗ ಅವರು "ಹಿಂದೆ ಭರತವಂಶದಲ್ಲಿ ನಹುಷ ಅಂತ ಒಬ್ಬ ಫೇಮಸ್ ರಾಜ ಇದ್ದ. ಒಮ್ಮೆ ಸ್ವರ್ಗದಲ್ಲಿ ಇಂದ್ರ ಇಲ್ದೇ ಇರೋವಾಗ ಈ ನಹುಷನ್ನ ಟೆಂಪರರಿ ಇಂದ್ರ ಮಾಡ್ತಾರೆ ಅಲ್ಲಿ. ಆದ್ರೆ ಈ ನಹುಷ ಇಂದ್ರನ ಹೆಂಡ್ತಿ ಶಚೀನೂ ತನ್ಗೆ ಬೇಕು ಅನ್ತಾನೆ. ಯಾಕಂದ್ರೆ ಟೆಂಪರರಿ ಇಂದ್ರ ಇವ್ನೇ ತಾನೇ ಹಾಗೆ ಶಚೀನೂ ಟೆಂಪರರಿ ಇರ್‍ಲಿ ಅಂತ. ಆಗ ಅವ್ಳು

ತನ್ನ ಗುರುಗಳ್ಹತ್ರ ಹೋಗಿ ಏನು ಮಾಡೋದು ಈಗ ಅಂತಾ ಕೇಳಿದ್ದಕ್ಕೆ ಅವ್ರು ಒಂದು ಪ್ಲಾನ್ ಹೇಳ್ತಾರೆ. ನಹುಷ ಕುಳ್ತಿರೋ ಪಲ್ಲಕೀನ್ನ ಸಪ್ತರ್ಷಿಗಳು ಹೊತ್ಕೊಂಡು ಶಚೀ ಮನೆಗೆ ಹೋದ್ರೆ ಅವ್ಳು ಅವ್ನಿಗೆ ಸಿಕ್ತಾಳೇ ಅಂತ. ಆ ಪೆದ್ದು ಮುಂಡೇಮಗಂಗೆ ಒಂದ್ಚೂರೂ ಅರ್ಥ ಆಗೋದು ಬೇಡ್ವಾ ಇದ್ರಲ್ಲೇನೋ ಮೋಸ ಇದೇಂತಾ ! ಹಾಗೆ ಹೋಗೋವಾಗ ಅಗಸ್ತ್ಯ ಋಷಿಗ್ಳಿಗೆ ಕಾಲಲ್ಲಿ ಒದೀತಾನೇ ಈ ಟೆಂಪರರಿ ಇಂದ್ರ. ಅವ್ರು ಎತ್ಕೋತಾನೇ ಒಂದು ಶಾಪಕೊಡ್ತಾರೆ 'ನೀನು ಹಾವಾಗಿ ಬೀಳು' ಅಂತ. ಆಗ ಇವ್ನು ಕಾಲ್ಗೆ ಬಿದ್ದು ತಪ್ಪಾಯ್ತೂಂತ ಬೇಡ್ಕೊಂಡಾಗ "ಮುಂದೆ ನಿಮ್ಮ ವಂಶದವ ಒಬ್ಬ ಬಂದು ನಿಂಗೆ ಮುಕ್ತಿ ಕೊಡ್ತಾನೆ ಅಂತ ಸಮಾಧಾನನೂ ಹೇಳ್ತಾರೆ"

"ಸರಿ, ಯಾಕೆ ಈ ಕತೆ ಈಗ?"

"ಆ ಪೆದ್ದ ನಹುಷಂಗೆ ಸಿಕ್ಕಿದ್ದಾದ್ರೂ ಏನು? ರಾಜ್ಯ ಹೋಯ್ತು, ಇಂದ್ರ ಪಟ್ಟ ಹೋಯ್ತು, ಮನುಷ್ಯ ಜನ್ಮ ಹೋಯ್ತು. ಹಾವಾಗಿ ಕಾಡಲ್ಲಿ ಬಿದ್ದ. ಮುಂದೆ ಧರ್ಮರಾಯ ಬಂದು ಬಿಡ್ಸಿದಾಗ ಸತ್ತು ಮೇಲ್ಹೋದ. ಒಂದು ತಪ್ಪಿಂದ ಎಷ್ಟು ತೊಂದ್ರೆ ಆಗುತ್ತೆ ಅಂತ.. ಸ್ವಲ್ಪ ಹೊತ್ತು ಕಣ್ಣುಮುಚ್ಚಿ ಈಸಿಚಯರಿನಲ್ಲಿ ಕುಳಿತಿದ್ದ ಅವರು, "ಇವತ್ತು ಯಾರು ಬಂದಿದ್ರು ಗೊತ್ತಾ ? ಅದೇ ಧರ್ಮರಾಯ ಈ ನಹುಷನ ಶಾಪ ಬಿಡಿಸೋದಕ್ಕೆ"

ಅವರ ಮಾತನ ತಲೆಬುಡ ಅರ್ಥವಾಗದ ನಾನು ಕಾಫಿ ಹೀರುವುದು ಬಿಟ್ಟು, ಬೇರೇನೂ ಉತ್ತರಿಸುವುದಿಲ್ಲ.

"ವಿದುರ ಅಂತ ಹೆಸ್ರು ಹದಿನೈದು ಹದಿನಾರು ವಯಸ್ಸು ಇರ್ಬೋದು. ನನ್ನ ಮರಿಮಗಾಂತೆ. ಕಾಲ್ಗೆ ನಮಸ್ಕಾರ ಮಾಡ್ದ. ನಾನು ಅವನ್ನ ತಬ್ಕೊಂಡೆ..." ಕಣ್ಣುಮುಚ್ಚಿ ಈಸಿಚಯರಿನಲ್ಲಿ ಒರಗಿದವರು ಬಾಯಿ ತೆರೆಯುವುದಿಲ್ಲ.

ಅವರು ಸಾಮಾನ್ಯವಾಗಿ ಯಾರಲ್ಲೂ ತನ್ನ ಬಾಳಿನ ಕತೆಯನ್ನು ಹೇಳಿಕೊಳ್ಳುವುದಿಲ್ಲ. ನನ್ನಲ್ಲಿ ಆ ವಿಚಾರ ಅಂದಿದ್ದಾರೆ. ನನ್ನ ಸ್ಮೃತಿ ಸುಮಾರು ಮೂವತ್ತು ವರ್ಷಗಳಷ್ಟು ಹಿಂದೆ ಓಡುತ್ತದೆ.

ಕುಂದಾಪುರದ ಹತ್ತಿರ ಉಪ್ಪೂರೋ ಉಪ್ಪುಂದವೋ ಅಲ್ಲಿಂದ ಬಂದವರು. ಮಲ್ಲೇಶ್ವರದಲ್ಲಿ ಆಫೀಸು, ಲಾಯರಾಗಿ ಒಳ್ಳೆಯ ಹೆಸರು. ಕೈತುಂಬಾ ಸಂಪಾದನೆ.

ಹೆಂಡತಿ ಇಬ್ಬರು ಗಂಡುಮಕ್ಕಳು ಒಳ್ಳೆಯ ಮನೆ ಇನ್ನೇನು ಬೇಕು. ಭುಜಂಗಯ್ಯ ಎತ್ತರವಾದ ಗಟ್ಟಿಮುಟ್ಟಾದ ಸುಂದರ ಆಳು. ಆಗಿನ್ನು ನನಗೆ ಅವರ ಪರಿಚಯ ಆಗಿರಲಿಲ್ಲ. ಎಲ್ಲರ ಕಷ್ಟ ಸುಖಕ್ಕಾಗುವ ಎಲ್ಲರೊಂದಿಗೆ ಬೆರೆಯುವ ಸ್ವಭಾವ. ಅವರ ಹೆಂಡತಿ ಸಂಶಯಗ್ರಸ್ಥೆ. ಈ ಒಂದು ಘಟನೆ ನಡೆಯುವ ತನಕ ಏನೆಲ್ಲಾ ನಡೆದಿತ್ತೋ ನನಗೆ ಆ ವಿಚಾರ ಅವರು ತಿಳಿಸಿಲ್ಲ. ಈಗ ಮನೆಯಲ್ಲಿ ಕಂಡ ಹೆಂಗಸು ಮಾಲಾಳನ್ನು ಆಗ ಅವರು ತಮ್ಮ ಆಫೀಸಿನಲ್ಲಿ ಕೆಲಸಕ್ಕೆ ಸೇರಿಸಿಕೊಂಡಿದ್ದರಂತೆ. ಅಲ್ಲಿಂದ ಪ್ರಾರಂಭವಾಯಿತು. ಅವರ ಮನೆಯಲ್ಲಿ ಪ್ರತಿದಿನ ಕುರುಕ್ಷೇತ್ರ. ಮನೆಯಾಕೆ ಸ್ವಲ್ಪ ಸಂಶಯ ಪ್ರವೃತ್ತಿಯವರಿರಬೇಕು. ಆಗ ಇಪ್ಪತ್ತೈದರ ಹರೆಯದ ಹುಡುಗಿ ಮೈತುಂಬಿ ಕೊಂಡು ಇದ್ದುದೇ ಅಪರಾಧವಾಯಿತು. ಐವತ್ತೈದರ ವಯಸ್ಸಿನ ಇವರೊಡನೆ ಕಾರಿನಲ್ಲಿ ಕುಳಿತುಕೊಳ್ಳುವುದಾಗಲೀ ಹೋಟೆಲಿನಲ್ಲಿ ಕಾಫಿ ಕುಡಿಯುವುದಾಗಲೀ ಒಂದು ಮಹಾಪರಾಧದಂತೆಯೇ ಕಂಡಿರಬೇಕು. ಮಿಕ್ಕುಳಿದ ಹುಡುಗರಾಗಲೀ ಹುಡುಗಿಯರಾಗಲೀ ಇವರೊಡನೆ ಇದ್ದಲ್ಲಿ ಅದು ತಪ್ಪಾಗದು. ಕೋರ್ಟಿನಲ್ಲಿ ವಾದಿಸುತ್ತಿದ್ದ ಇವರ ಬಾಯಿ ಮನೆಯಲ್ಲಿ ಬೀಗ ಹಾಕಿಕೊಂಡೇ ಇರುತ್ತಿತ್ತು. ಅಂತೂ ಒಂದು ದಿನ ಬಂತೇ ಬಂತು. ಕೋರ್ಟಿನಲ್ಲಿ ಕಟಕಟೆಯಲ್ಲಿ ಕಕ್ಷಿದಾರರನ್ನು ನಿಲ್ಲಿಸುತ್ತಿದ್ದ ಇವರೇ ಒಂದು ದಿನ ಅಲ್ಲಿ ನಿಲ್ಲಬೇಕಾಯಿತು. ಆರು ತಿಂಗಳೊಳಗೆ ವಿಚ್ಛೇದನ ನಡೆದೇ ಹೋಯಿತು. ಮನೆಯಾಕೆ ಈ ಮಕ್ಕಳನ್ನು ಕರೆದುಕೊಂಡು ಹೋದವಳು ಈ ಕಡೆಗೆ ತಲೆ ಹಾಕಲೇ ಇಲ್ಲ. ಮನೆ ಬಿಡುವಾಗ ಮೊದಲನೆಯ ಮಗನಿಗೆ ಮದುವೆಯೂ ನಿಶ್ಚಯವಾಗಿತ್ತು. ಇವರ ಬಾಳಿನಲ್ಲಿ ಮಕ್ಕಳ ಮದುವೆ ನೋಡುವ ಸಂಭ್ರಮವಾಗಲೀ ಮೊಮ್ಮಕ್ಕಳೊಡನೆ ಆಡುವ ಸಂತೋಷವಾಗಲೀ ಬರಲೇ ಇಲ್ಲ. ಅವರೆಲ್ಲಾ ಎಲ್ಲಿದ್ದಾರೆ ಏನು ಮಾಡುತ್ತಿದ್ದಾರೆಂಬ ಸುದ್ದಿಯೇ ಇವರಿಗೆ ಇಲ್ಲ. ಒಂಟಿ ಜೀವನ ಬಾಳಲಾರಂಭಿಸಿದರು. ಕಳೆದ ಸಿಹಿ ನೆನಪಿನೊಂದಿಗೆ ಅದೆಷ್ಟು ಕಣ್ಣೀರು ಸುರಿಸಿದ್ದಾರೋ ಅವರೊಬ್ಬರೇ ಬಲ್ಲರು.

ಯಾರಿಂದಾಗಿ ಅವರು ಇಷ್ಟೆಲ್ಲಾ ಅನುಭವಿಸಬೇಕಾಯ್ತೋ ಆ ಮಾಲಾ ಒಂದು ದಿನ ಇದ್ದಕ್ಕಿದ್ದಂತೆ ಆಫೀಸಿನಿಂದ ಯಾರಿಗೂ ತಿಳಿಯದಂತೆ ಯಾರೊಡನೆಯೋ ಓಡಿಹೋದಳು. ಅವಳ ಮನೆಯವರಂತೂ ಅವಳನ್ನು ದೂರ ಮಾಡಿದರು. ಒಂದಷ್ಟು ದಿನಗಳ ನಂತರ ಮೋಹಿಸಿ ಪ್ರೀತಿಸಿದ ಗಂಡೂ ಅವಳ ಚಾರಿತ್ರ್ಯದ ಬಗ್ಗೆ ಸಂದೇಹಿಸಿ ಅವಳನ್ನು ಅವಳ ಮಗುವನ್ನು ದೂರ ಮಾಡಿದ. ಆಸರೆ ಇಲ್ಲದ ಈ ಹೆಣ್ಣು ಒಂದು

ಗಂಡು ಕೂಸಿನೊಡನೆ ಪುನಃ ಬಂದು ಸೇರಿದುದು ಈ ಭುಜಂಗಯ್ಯನನ್ನೇ. 'ದೇವರು ಎಂದೂ ಕುರುಡನಲ್ಲ, ಒಂದು ವಿಧದಲ್ಲಿ ಕಿತ್ತುಕೊಂಡುದನ್ನು ಇನ್ನೊಂದು ವಿಧದಲ್ಲಿ ನನಗೆ ಕೊಟ್ಟ. ಹೆಣ್ಣುಮಗಳನ್ನು ಮೊಮ್ಮಗನನ್ನು ಕೊಟ್ಟ, ಎಂದು ಅವರಾಡಿಕೊಂಡದ್ದನ್ನು ನಾನು ಕೇಳಿದ್ದೇನೆ.

"ಇಷ್ಟು ವರ್ಷಗಳು ಕಡಿದು ಹೋದ ಸಂಬಂಧ ಈಗ ಹೀಗೆ ಹುಟ್ಕೋಬೇಕೇ"? ನಿಧಾನವಾಗಿ ಕಣ್ಣು ತೆರೆಯುತ್ತಾ ಭುಜಂಗಯ್ಯ ಹೇಳಿದಾಗ,

"ದೇವ್ರು ದೊಡ್ಡವ" ನಾನಂದೆ.

"ಯಾಕೆ? ಈ ಧರ್ಮರಾಯ ಬಂದಾಂತ ನಾನು ಸಾಮ್ರಾಜ್ಯ ಅವಂಗೆ ಕೊಟ್ಟು ಸಾಯ್ಬೇಂತಾನಾ ! ಕಳ್ದು ಹೋದ ಈ ಮೂವತ್ತು ವರ್ಷ ಯಾರು ನಂಗೆ ವಾಪ್ಸು ಕೊಡ್ತಾರೆ ? ಹೆಂಡ್ತಿ ಮಕ್ಳು ಮೊಮ್ಮಕ್ಳಿಗೆ ಬೇಡ್ವೇ ಇರೋ ಸಂಬಂಧ ನನ್ನ ಮರೀಮಗಾ ಅಂತ ಕೇಳಿದ ಕೂಡ್ಲೆ ಹುಟ್ಟಿಕೊಳ್ಳಾ? ಅದು ಬರುತ್ತಾ?"

"ಇಮೋಷನಲ್ ಆಗ್ಬೇಡಿ"

"ನಿಜ, ಹಾಗಾಗಿ ಎದೆ ಒಡ್ಕೊಂಡು ಈಗ್ಲೇ ಪ್ರಾಣ ಬಿಡಕೂಡ್ದು ಅಲ್ವಾ ? ಇವ್ನಿಂದಾಗಿ ಆ ಸಂಬಂಧ ಪುನಃ ಹುಟ್ಕೊಂಡು ಬಂದ್ರೆ ಅದನ್ನ ನಂಗೆ ಅಕ್ಸೆಪ್ಟ್ ಮಾಡೋಕೆ ಆಗುತ್ತಾ ?"

"ಇಷ್ಟೊಂದು ವರ್ಷಗಳಲ್ಲಿ ನೀವು ಇಷ್ಟೊಂದು...."

"ಹೌದು. ಇಮೋಷನಲ್ ಅಂತ ಅನ್ನಿ, ಯಾಕನ್ನೋದಿಲ್ಲ ? ನಾನು ಮಾಡ್ದೇ ಇರೋ ತಪ್ಪನ್ನ ನನ್ಮೇಲೆ ಹೇರಿ ಇದ್ದು ಬದ್ದುದನ್ನೆಲ್ಲಾ ಕಿತ್ಕೊಂಡು, ಪಬ್ಲಿಕ್ ಆಗಿ ಅವಮಾನ ಮಾಡಿ ಎಲ್ಲಾ ಸಂಬಂಧ ಕಡ್ಕೊಂಡು ಹೋಗಿ ಈಗ ಇರೋ ಒಂದ್ಚೂರು ಆಸ್ತೀನ್ನ ನುಂಗೋದಕ್ಕೆ ತಾನೇ ಬಂದಿರೋದು. ನಾನು ಆದಷ್ಟು ಬೇಗ ಸಾಯ್ಲೀಂತ ಹರಕೆ ಹೊರ್ತಿದ್ದೋರ ಮನಸ್ಸು ಬದಲಾಯ್ತಾ ! ಈ ಮನೇ ಮೇಲೆ ಕಣ್ಣು ಬಿದ್ದಿರ್ಬೇಕು. ಕೊಲೆ ಮಾಡಿರೋ ಕ್ರಿಮಿನಲ್ಸ್‌ಗೂ ಆಜೀವ ಶಿಕ್ಷೆ ಅಂತಹೇಳಿ ಹದಿನಾಲ್ಕು ವರ್ಷಕ್ಕೆ ಇಳಿಸ್ತಾರೆ. ಒಂದು ವೇಳೆ ನನ್ನಿಂದ ತಪ್ಪಾಗಿದ್ರೂ ಇಷ್ಟು ದೊಡ್ಡ ಶಿಕ್ಷೆನಾ? ಹೋಗ್ಲಿ ಮಕ್ಳಿಗೆ ಏನು ಅನ್ಯಾಯ ಮಾಡಿದ್ದೀನಿ !"

"ಭುಜಂಗಯ್ಯನವರೇ ಇಷ್ಟೊಂದು ವರ್ಷ ಕಂಪೋಸ್ ಆಗಿದ್ದ ನೀವು ಯಾಕೆ ಇಷ್ಟೊಂದು ಅಪ್ಸೆಟ್ ಆಗ್ಬೇಕು ? ಒಂದಷ್ಟು ದಿನ ಕಾದು ನೋಡಿದ್ರಾಯ್ತು, ಒಳಗಿನ ಬಂಡ್ವಾಳ ತಿಳೀತದೆ. ಆ ಹುಡ್ಗ ನಿಜವಾಗ್ಲೂ ನಿಮ್ಮೇಲೆ ಇಂಟ್ರೆಸ್ಟೋ, ಕನಿಕರಾನೋ ಅಥ್ವಾ ನಿಜವಾದ ಮಮತೆ ಇಟ್ಕೊಂಡು ಬರ್‍ತಾನೋ ಇಲ್ವೋ ತಿಳೀತದೆ. ಆಗ ನೀವು ನಿಮ್ಮ ಡಿಸಿಷನ್ ತಗೊಂಡ್ರಾಯ್ತು. ನಿಮ್ಗೆ ಬುದ್ಧಿ ಹೇಳೋ ವಯ್ಸು ನಂದಲ್ಲ ಆದ್ರೂ ಏನೋ...."

"ಡಾಕ್ಟ್ರೇ ನಿಜ ನೀವು ಹೇಳೋದು. ಕಾಯ್ತೀನೆ ಒಂದಷ್ಟು ದಿನ. ಬಣ್ಣ ಬಯಲಾಗ್ಬೋದ್ದು, ಇಲ್ಲಾ ಅದ್ಕೆ ಮೊದ್ಲೇ ನಾನು ಗೊಟಕ್ ಅಂದ್ರೆ ಈ ಮನೆ ಆಸ್ತಿ ಪಾಸ್ತಿ ಎಲ್ಲಾ ಅವ್ರಿಗೆ ಹೋಗುತ್ತೆ. ಹ್ಯಾಗೆ ನೋಡಿ ನಮ್ಮ ಕಾನೂನು ಇದೇ ಅಂತ. ಸಂಬಂಧ ಬೇಡ ಅಂತ ದೂರ ಹೋದವ್ರಿಗೂ ಸಂಬಂಧ ಉಳಿಸ್ಕೊಂಡು ಆಸ್ತೀಲಿ ಭಾಗ ಕೊಡ್ಬೇಕು."

"ಸಂಬಂಧ ಕಳಚಿಕೊಂಡ್ರೂ ನಿಮ್ಮ ಜೀನ್ ಬದ್ಲಾಯಿಸೋಕ್ಕೆ ಆಗುತ್ತಾ?"

"ಅದಕ್ಕೇ ನಹುಷನ ಕತೆ ಹೇಳಿದ್ದು"

"ಅಂದ್ರೇ?"

"ವಂಶಸ್ಥ ಅಂತ ತಿಳಿದಾಕ್ಷಣ ವಯಸ್ಸಾದವ್ರು ಆಸ್ತಿ ಬಿಟ್ಕೊಟ್ಟು ನೆಟ್ಗೆ ಗೊಟಕ್ ಅನ್ಬೇಕು. ಹೋಗ್ಲಿ ಬಿಡಿ ಈಗ ನಾನೇನು ಮಾಡ್ಬೇಕು ಅಂತ ಹೇಳಿ" ಆಗ ನಾನು, "ನೋಡಿ ಯಜಮಾನ್ರೆ, ನನ್ನ ಮನೆ ವಿಚಾರ ಅಲ್ಲ ಇದು. ಆದ್ರೆ 'ಹೇಳಿ' ಅಂತ ನೀವು ವಿಶ್ವಾಸ ಇಟ್ಟು ಕೇಳಿದ್ಮೇಲೆ ನಂಗೆ ತೋಚಿದ್ದು ಹೇಳ್ತೀನಿ. ನೀವು ಈಗ ಯಯಾತಿ ಆಗ್ಬೇಕು."

"ಅಂದ್ರೆ?"

"ನಹುಷನ ಮಗ ಯಯಾತಿಗೆ ದೇವಯಾನಿ ಹೆಂಡ್ತಿ ನಾಲ್ಕುಜನ ಮಕ್ಳು ಯದು, ತುರ್ವಸು, ದ್ರುಹು, ಅನು ಅಂತ. ಇಂಟ್ಕೊಂಡವ್ಳು ಶರ್ಮಿಷ್ಠೆಯ ಮಗ ಪೂರು. ಅವ್ನಿಗೆ ವಯಸ್ಸಾದ್ರೂ ಇನ್ನೂ ಮಜಾ ಮಾಡಿದ್ದು ಸಾಲಿಲ್ಲ ಅಂತ ಮಕ್ಳಹತ್ರ ಅವ್ರ ಯೌವ್ವನ ಕೇಳ್ತಾನೆ. ಆದ್ರೆ ಕಟ್ಕೊಂಡವಳ ಮಕ್ಳು ಯಾರೂ ಕೊಡೋಕೆ ಒಪ್ಪೋಲ್ಲ.

ಅವ್ರನ್ನೆಲ್ಲಾ ಮನೇ ಬಿಟ್ಟು ಓಡಿಸ್ತಾನೆ ಯಯಾತಿ. ಆದ್ರೆ ಇಟ್ಕೊಂಡವ್ನ ಮಗ ಪುರು ಯೌವ್ವನ ಕೊಡ್ತಾನೆ ಅಪ್ಪಂಗೆ. ಸ್ವಲ್ಪ ವರ್ಷಗಳಲ್ಲಿ ಅವಂಗೆ ಮಜಾ ಮಾಡಿದ್ದು ಸಾಕಾಗಿ ಪುರುಗೆ ಯೌವ್ವನ ವಾಪ್ಸು ಕೊಡ್ತಾನಲ್ದೆ ರಾಜ್ಯಾನೂ ಸಿಕ್ಕುತ್ತೆ. ಅರ್ಥ ಆಯ್ತಾ ಭುಜಂಗಯ್ಯನವ್ರೇ"

ಕಣ್ಣುಮುಚ್ಚಿಕೊಂಡು ಯೋಚನೆ ಮಾಡುತ್ತಾ ಇದ್ದ ಭುಜಂಗಯ್ಯನವರು,

"ಡಾಕ್ಟ್ರೇ ಮುಂದಿನ ಭಾನುವಾರ ದಯವಿಟ್ಟು ಬನ್ನಿ"

ಮುಂದಿನ ಭಾನುವಾರ ನಾನು ತಪ್ಪದೇ ಅವರ ಮನೆಗೆ ಹೋಗುತ್ತೇನೆ. ಆದರೆ ಅವರು ಆ ವಿಚಾರವಾಗಿ ಮಾತನಾಡುವುದೇ ಇಲ್ಲ. ಬಳಿಕ ಹಲವಾರು ಬಾರಿ ಅವರ ಮನೆಗೆ ಹೋದರೂ ಒಂದೆರಡು ಬಾರಿ ಆ ವಿಚಾರ ನಾನಾಗಿಯೇ ಎತ್ತಿದರೂ "ನೋಡೋಣ" ಎಂದು ಅಂದರಲ್ಲದೇ ಬೇರೇನೂ ಅನ್ನಲಿಲ್ಲ. ಒಂದೆರಡು ಬಾರಿ ಅವರ ಮರಿಮಗ ವಿದುರನೂ ಅಲ್ಲಿ ಸಿಕ್ಕಿದ. ಮಾತನಾಡಿದ. ಅವನ ಕಳಕಳಿ ಸಹಜವಾಗಿಯೇ ಕಂಡಿತು ನನಗೆ.

ಮಾಲಾಳ ಮಗ ಸಂಜಯ ನಾನು ಹೋದಾಗಲೆಲ್ಲಾ ಸಿಗುತ್ತಿದ್ದ ಮಾತನಾಡಿಸುತ್ತಿದ್ದ. ಚಿಕ್ಕ ಪುಟ್ಟ ಕೆಲಸ ಮಾಡುತ್ತಿದ್ದ. ಭುಜಂಗಯ್ಯನನ್ನು 'ತಾತ' ಎಂದೇ ಕರೆಯುತ್ತಿದ್ದ. ಮಾಲಾ ಅವರನ್ನು 'ಅಪ್ಪಾಜಿ' ಎಂದೇ ಕರೆಯುತ್ತಿದ್ದಳು. ಮಗ ಇಂಜಿನೀಯರ್ ಆಗಿ ಬರುವುದನ್ನೇ ಕಾಯುತ್ತಿದ್ದಾಳೆ. ನನಗೆ ಕೆಲಬಾರಿ ಅನ್ನಿಸಿದ್ದುಂಟು. ಇದು ಅಭಿಮಾನವೇ ಅಸಹಾಯಕತನವೇ, ಆದರ್ಶವೇ, ಮೂರ್ಖತನವೇ ಎಂದು. ಆದರೆ ಇನ್ನೊಬ್ಬರ ಮನಸ್ಸು ಬಗೆದು ನೋಡುವ ಶಕ್ತಿಯಾಗಲೀ, ಅಗತ್ಯತೆಯಾಗಲೀ ನನಗಿಲ್ಲ. ಆ ಸೌಜನ್ಯತೆ ನನಗಿದೆ.

ಮುಂದೊಂದು ದಿನ ಭುಜಂಗಯ್ಯನವರು ನನ್ನೊಡನೆ,

"ಡಾಕ್ಟ್ರೇ ನಾನು ನಹುಷ ಮತ್ತು ಯಯಾತಿ ಆಗ್ತೀನಿ. ಒಬ್ಬನೇ ಆಗೋವಷ್ಟು ದೊಡ್ಡವನಲ್ಲ, ಚಿಕ್ಕವನೂ ಅಲ್ಲ"

"ನೋಡಿ ನಹುಷ ತನ್ನ ವಂಶಸ್ಥರಿಗೇ ರಾಜ್ಯ ಕೊಟ್ಟು ಸತ್ತ. ದೊಡ್ಡ ಕೆಲ್ಸ ದೊಡ್ಡ ಮನ್ಸು ಪುನಃ ತಂಗೇ ಬೇಕು ಅಂತ ಕೇಳಿಲ್ಲ. ಚಿಕ್ಕ ಕೆಲ್ಸಾನೂ ಹೌದು. ಬೇರೆ ಯಾರ್ದೂ,

ಕೊಡುವಷ್ಟು ದೊಡ್ಡ ಮನಸ್ಸಿಲ್ಲ ತನ್ನ ವಂಶಸ್ಥರಿಗೇ ಕೊಟ್ಟ. ಯಾಯಾತೀನೂ ಅಷ್ಟೇ. ತನ್ನ ಸ್ವಾರ್ಥಕ್ಕೆ ಅವರ್ಯಾರೂ ಬಂದಿಲ್ಲಾಂತ ಅವ್ರನ್ನೆಲ್ಲಾ ಓಡ್ಸಿದ. ಚಿಕ್ಕವನಾದ. ಆದ್ರೆ ಇಟ್ಕೊಂಡವ್ನ ಮಗಂಗೆ ಕೊಟ್ಟು ಹೋದ. ದೊಡ್ಡ ಕೆಲ್ಸ."

ಬಳಿಕ ಸ್ವಲ್ಪ ಹೊತ್ತು ಸುಮ್ಮನಿದ್ದು ನಿಧಾನವಾಗಿ,

"ನಾನು ಸತ್ತಮೇಲೆ ಈ ಆಸ್ತಿ ನನ್ನ ಮಕ್ಳ ಹಕ್ಕಾಗುತ್ತೆ. ಅವರ್ಯಾರಿಗೂ ಕೊಡೋ ಇಷ್ಟ ನಂಗಿಲ್ಲ. ನಾನು ಹಠಮಾರಿ ಅಂತ ಅನ್ನಿಸ್ಕೋಬೇದು. ಈಗ್ಲೇ ವಿಲ್ ಮಾಡ್ತೀನಿ. ಈ ಹುಡ್ಗ ವಿದುರ ನಿಜವಾಗ್ಲೂ ಪ್ರೀತಿಯಿಂದ ನೋಡ್ಕೋತಾ ಇದ್ದಾನೆ. ಅವಂಗೆ ಈ ಆಸ್ತಿ. ನಾನು ನಹುಷ. ಆದ್ರೆ ಮಾಲಾಳಿಗೂ ಸಂಜಯಂಗೂ ಅಷ್ಟೇ ಸಮನಾದ ಆಸ್ತಿ ಮಾಡಿಕೊಡ್ತೇನೆ. ನಾನು ಯಯಾತಿ."

ಮಾಲಾ ನನ್ನೊಡನೆ ಆಗಾಗ್ಗೆ ಅನ್ನುತ್ತಿದ್ದ ಒಂದು ಮಾತು ನೆನಪಾಗುತ್ತದೆ. 'ಯಾರು ಏನೇ ಅನ್ಲಿ ಈ ಅಪ್ಪಾಜಿ ನನ್ನ ಪಾಲಿನ ದೇವ್ರು !'



### ಕಾರಂತರು ಹೇಳಿದ್ದು

ಜನ ಸ್ವಂತ ವಿವೇಚನೆಯಿಲ್ಲದಾಗ, ಒಂದು ಬಗೆಯ ಸಾಂಪ್ರದಾಯಿಕತನವನ್ನು ಬಿಟ್ಟರೆ, ಇನ್ನೊಂದನ್ನು ಅಷ್ಟೇ ಅಂಧಶ್ರದ್ಧೆಯಿಂದ ಕಟ್ಟಿಕೊಂಡು ಬಾಳುತ್ತಾರೆ.

* * *

ಆನಂದ ಎಂಬುದು ಕೆಲಸ ಮುಗಿದ ಮೇಲೆ ಬರುವ ತೃಪ್ತಿಯೂ ಹೌದು, ಕೆಲಸ ಮಾಡುತ್ತಿರುವಾಗ ಬರುವ ತನ್ಮಯತೆ, ಉತ್ಸಾಹಗಳೂ ಹೌದು.

* * *

ಇತರರಿಗೆ ನನ್ನಿಂದ ಆದಷ್ಟು ಕಡಿಮೆ ನೋವುಂಟಾಗುವಂತೆ ಹಾಗೂ ಪರಿಸರಕ್ಕೆ ಸಾಧ್ಯವಾದಷ್ಟು ಕಡಿಮೆ ಹಾನಿಯುಂಟಾಗುವಂತೆ ಯತ್ನಿಸುತ್ತಾ ಜೀವಿಸುವುದೇ ನನ್ನ ಜೀವನದ ಧ್ಯೇಯಗಳಲ್ಲಿ ಮುಖ್ಯವಾದ ಅಂಶಗಳು.

# ಕನ್ನಡ ಸೃಜಿಸಿದ ಮಹಾವಿಸ್ಮಯ ಡಾ|| ಶಿವರಾಮ ಕಾರಂತ

*ಡಾ|| ಪುರುಷೋತ್ತಮ ಬಿಳಿಮಲೆ*

1930ರ ದಶಕದ ಕರ್ನಾಟಕವು ಇಡೀ ಭಾರತದ ಹಾಗೆ ಸ್ವಾತಂತ್ರ್ಯಕ್ಕಾಗಿ ಹಪಹಪಿಸುತ್ತಿತ್ತು. ಬಿಳಿಟೊಪ್ಪಿ ಧರಿಸಿದ ಭಾರತೀಯರು ಗಾಂಧೀಜಿ ನೇತೃತ್ವದಲ್ಲಿ ಬ್ರಿಟಿಷರನ್ನು ಭಾರತದಿಂದ ಓಡಿಸಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಹೆಣಗಾಡುತ್ತಿದ್ದರು. ದೇಶಕ್ಕೆ ದೇಶವೇ ಒಂದು ಬಗೆಯ ಉನ್ಮಾದದಲ್ಲಿರುವಾಗ ಈ ಉನ್ಮಾದದ ಸೆಳೆತಕ್ಕೆ ಸಿಲುಕದ ಡಾ. ಶಿವರಾಮ ಕಾರಂತರು ಪುತ್ತೂರಿನಲ್ಲಿ ತಣ್ಣಗೆ ಕುಳಿತು 'ಚೋಮನ ದುಡಿ' ಬರೆದು 'ದೇಶದ ಸಮಸ್ಯೆ ಇರುವುದು ನಮ್ಮ ಭೂಮಿ ಸಂಬಂಧದಲ್ಲಿಯೇ ಹೊರತು ಬೇರೆಡೆ ಅಲ್ಲ. ಬ್ರಿಟಿಷರು ಇಲ್ಲಿಂದ ಹೋದ ಕೂಡಲೇ ನಮ್ಮ ಸಮಸ್ಯೆಗಳೆಲ್ಲ ಪರಿಹಾರವಾಗುವುದಿಲ್ಲ" ಎಂಬ ಸಂದೇಶವನ್ನು ರವಾನಿಸಿಬಿಟ್ಟರು. ಸಮಕಾಲೀನ ಸಂಗತಿಗಳಿಂದ ಹೀಗೆ ಸಿಡಿದು ದೂರನಿಲ್ಲಬಲ್ಲ ಬರಹಗಾರರೇ ಅತಿ ದೊಡ್ಡ ಬರಹಗಾರರು.

ಸಂಖ್ಯಾದೃಷ್ಟಿಯಿಂದಲೂ ಕಾರಂತರು ದೊಡ್ಡ ಬರಹಗಾರರೇ ಹೌದು. ಒಟ್ಟು 415 ಪುಸ್ತಕಗಳನ್ನು ಅವರು ಪ್ರಕಟಿಸಿದ್ದಾರೆ. ಇದರಲ್ಲಿ ಅವರು ಬರೆದ ಸಾವಿರಾರು ಲೇಖನಗಳುಸೇರಿಲ್ಲ. ಈ ಪುಸ್ತಕಗಳ ವೈವಿಧ್ಯವೂ ಅಪಾರ. ಸಾಹಿತ್ಯ, ಸಂಗೀತ, ಚಿತ್ರಕಲೆ, ಶಬ್ದಕೋಶ, ನೃತ್ಯ, ನಾಟಕ, ಆತ್ಮಕತೆ, ಜಾನಪದ, ಶಿಲ್ಪ, ವಿಜ್ಞಾನ, ಮನೋವಿಜ್ಞಾನ, ಅನುವಾದ, ಸಂಪಾದನೆ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಪರಿಸರ, ಸಿನಿಮಾ, ರಾಜಕೀಯ, ವಿಶ್ವಕೋಶ, ವೈದ್ಯಶಾಸ್ತ್ರ-ಹೀಗೆ ಅವರ ಬರವಣಿಗೆಯ ವಿಸ್ತಾರವೇ ನಮ್ಮನ್ನು ದಂಗು ಬಡಿಸುತ್ತದೆ. 'ಕೋಳಿ ಸಾಕಣೆ' ಬಗೆಗೂ ಅವರೊಂದು ಪುಸ್ತಕ ಬರೆದಿದ್ದಾರೆ ಎಂದರೆ ಸಾಕಲ್ಲ ?

ಹೀಗೆ ಹೇಳಿದಾಗ ಕಾರಂತರು ಸುಮ್ಮನೆ ಬರೆಯುತ್ತಾ ಕುಳಿತಿದ್ದರು ಎಂದೇನೂ ಭಾವಿಸಬೇಕಾಗಿಲ್ಲ. ಅವರು ಸ್ವತಃ ಮಾಡ ಹೊರಟಿರುವ ಕೆಲಸಗಳು ನೂರಾರು. ಪುತ್ತೂರಿನ ಪುಟಾಣಿಗಳಿಗೆ ಬಾಲವನದಲ್ಲಿ ಶಾಲೆ ನಡೆಸಿದರು. ಯಕ್ಷಗಾನ ಕಲಿತು, ಗೆಜ್ಜೆ ಕಟ್ಟಿ ಕುಣಿದರು, ಕಲಾವಿದರನ್ನು ಕುಣಿಸಿದರು, ದೇಶ, ವಿದೇಶಗಳಿಗೆ ಪ್ರಯಾಣ ಮಾಡಿ ಪ್ರವಾಸ ಕಥನಗಳನ್ನು ಬರೆದರು. ಪುತ್ತೂರು ದಸರಾದಿಂದ ಆರಂಭಿಸಿ

ದೆಹಲಿಯವರೆಗೆ ಅನೇಕ ಕಾರ್ಯಕ್ರಮಗಳನ್ನು ಸಂಘಟಿಸಿದರು. ಪರಿಸರ ಆಂದೋಲನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಚುನಾವಣೆಯಲ್ಲಿ ಸ್ಪರ್ಧಿಸಿದರು. ಸಿನಿಮಾ ಮಾಡಿದರು. ವೇಶ್ಯಾವಾಟಿಕೆ ನಿರ್ಮೂಲನೆಗೆ ಹರಸಾಹಸ ಮಾಡಿದರು. ವಯಸ್ಕರ ಶಿಕ್ಷಣಕ್ಕೆ ಕರೆ ನೀಡಿದರು. ಗೀತ ನಾಟಕಗಳನ್ನು ಬರೆದು ಆಡಿಸಿದರು. ಇನ್ನೂ ಏನೇನೋ ? ಇವೆಲ್ಲವನ್ನೂ ಮಾಡಲು ಅವರಲ್ಲಿ ಸಮಯ ಎಲ್ಲಿತ್ತು ? ದಿನಕ್ಕೆ ಎಷ್ಟು ಗಂಟೆ ಅವರು ದುಡಿಯುತ್ತಿದ್ದರು ? ಇದೊಂದು ದೊಡ್ಡ ವಿಸ್ಮಯ. ಕಾರಂತರದು ದೈತ್ಯ ಪ್ರತಿಭೆ ಎಂದೆನ್ನುವಾಗ ಇವೆಲ್ಲ ಕಣ್ಣ ಮುಂದೆ ನಿಲ್ಲುತ್ತದೆ. ಡಿ.ಆರ್. ನಾಗರಾಜರ ಮಾತಲ್ಲಾದರೆ "ಸಣ್ಣ ಪುಟ್ಟ ಗುಡ್ಡಗಳಿಂದ ಸುತ್ತುವರಿದ ಮಹಾಪರ್ವತ"ದಂತೆ ಡಾ. ಶಿವರಾಮ ಕಾರಂತರು ಕಾಣುತ್ತಾರೆ. ಕಾರಂತರ ಈ ಬಹುಮುಖೀ ಪ್ರತಿಭೆಯ ಬಗ್ಗೆ ಅನುಮಾನ ಪಟ್ಟವರೆಂದರೆ ಕವಿ ಗೋಪಾಲಕೃಷ್ಣ ಅಡಿಗರು ಮಾತ್ರ. ಅವರ ಪ್ರಕಾರ "ಕಾರಂತರ ಪ್ರತಿಭೆ ಹಲವು ಕಡೆ ಹಂಚಿ ಹೋಗಿರುವುದರಿಂದ ಎಲ್ಲಾ ಆಸಕ್ತಿಗಳನ್ನು ಏಕತ್ರಗೊಳಿಸಬಲ್ಲ, ಏಕಾಗ್ರಗೊಳಿಸಬಲ್ಲ ಕೆಲಸ" ನಡೆಯದೇ ಹೋಯಿತು. ಕಾರಂತರ ಕಾದಂಬರಿಗಳನ್ನು ಓದಿದವರಿಗೆ ಅಡಿಗರ ಮಾತನ್ನು ಒಪ್ಪುವುದು ಕಷ್ಟವಾದೀತು.

ಕಾರಂತರು ಬರೆದ 'ಬೆಟ್ಟದ ಜೀವ,' 'ಮೈಮನಗಳ ಸುಳಿಯಲ್ಲಿ', 'ಅಳಿದ ಮೇಲೆ, 'ಮರಳಿ ಮಣ್ಣಿಗೆ' ಮತ್ತು 'ಚೋಮನ ದುಡಿ' ಕಾದಂಬರಿಗಳು ಸಾಹಿತ್ಯ ವಿಮರ್ಶೆಯ ಯಾವುದೇ ಮಾನದಂಡಗಳಿಂದ ಅಳೆದರೂ ಉತ್ಕೃಷ್ಟವಾಗಿ ನಿಲ್ಲಬಲ್ಲಂಥ ರಚನೆಗಳಾಗಿವೆ. 20ನೆಯ ಶತಮಾನದುದ್ದಕ್ಕೂ ಎಲ್ಲ ಬರಹಗಾರರಿಗೂ ಪ್ರೇರಣೆ ನೀಡಿದ ಉದಾರವಾದೀ ಮಾನವವಾದದ ಪ್ರಭಾವದಿಂದ ಪ್ರೇರಿತರಾದ ಕಾರಂತರು ಮನುಷ್ಯನನ್ನು ವಿಶ್ವ ವ್ಯವಸ್ಥೆಯ ಕೇಂದ್ರದಲ್ಲಿರಿಸಿ ತಮ್ಮೆಲ್ಲಾ ಕಾದಂಬರಿಗಳನ್ನು ಬರೆದರು. ಜಗತ್ತಿನ ಇತರ ಅಂಶಗಳೇನಿದ್ದರೂ ಮನುಷ್ಯನ ಮೂಲಭೂತ ಅವಶ್ಯಕತೆಗಳಿಗೆ ಅನುಗುಣವಾಗಿ ಸೃಷ್ಟಿಯಾದದ್ದು ಎಂದು ಅವರು ಭಾವಿಸಿದರು. ಹೀಗಾಗಿ ಮಾನವ ಸೃಷ್ಟಿಸಿಕೊಂಡ ಸಂಸಾರ, ಜಾತಿ ಪದ್ಧತಿ, ರಾಜಕೀಯ, ಕಾಮ ಮತ್ತಿತರ ಅಂಶಗಳನ್ನು ಅವರು ಪರಿಶೀಲನೆಗೆ ಒಳಪಡಿಸಿದರು. ಮಾನವಜನ್ಮದ ಅಗತ್ಯವನ್ನು ತಿರಸ್ಕರಿಸುವ ಮತ, ಧರ್ಮ, ದೇವರು, ಸ್ವಾಮಿಗಳನ್ನೆಲ್ಲಾ ದೂರ ಇರಿಸಿದರು. ವಿಶ್ವ ವ್ಯವಸ್ಥೆಯಲ್ಲಿ ಪ್ರಜ್ಞಾವಂತ ಜೀವಿಯಾಗಿ ಮಾನವನ ಬದುಕು

ಹೇಗಿರಬೇಕು, ಅವರ ಜವಾಬ್ದಾರಿಗಳೇನು ಎಂಬ ಬಗ್ಗೆ ಅವರು ನಿರಂತರವಾಗಿ ಚಿಂತಿಸಿದರು. 'ನಮ್ಮ ಅಳತೆಯನ್ನು ಮೀರದ ದೇವರು' ಎಂಬ ಹೆಸರಿನ ಅವರ ವೈಚಾರಿಕ ಲೇಖನವನ್ನು ಆಸಕ್ತರು ಓದಬೇಕು. ದೇವರ ಮೇಲೆ ಭಾರ ಹಾಕಿ ಹೊಟ್ಟೆ ಬೆಳೆಸುವವರ ಸೋಗಲಾಡಿತನವನ್ನು ಕಾರಂತರು ಜೀವಿತದ ಕೊನೆವರೆಗೂ ಲೇವಡಿ ಮಾಡುತ್ತಿದ್ದರು. "ಇಹವೇ ನನ್ನೆಲ್ಲಾ ಸಾಧನೆಗಳ ರಂಗಸ್ಥಳ" ಎಂಬುದು ಅವರ ಘೋಷವಾಕ್ಯ.

ಸಾಹಿತ್ಯ ಕೃತಿಗಳ ಬಗೆಗೆ ಶಿವರಾಮ ಕಾರಂತರ ಧೋರಣೆಯೂ ಆರೋಗ್ಯಕರವಾಗಿತ್ತು. ಅವರು ಹೇಳುತ್ತಾರೆ "ಸಾಹಿತ್ಯ ಕೃತಿಗಳು ಸಹಜ ಜೀವನದ ಚಿತ್ರಗಳಂತೆ ಕಂಡರೂ ತೀರ ಅವುಗಳ ತದ್ ಪ್ರತಿಗಳಲ್ಲ. ವಸ್ತುವನ್ನು ಇದ್ದಕ್ಕಿದ್ದಂತೆ ಹೇಳುವುದಕ್ಕೆ ಇಂದು ಎಷ್ಟೋ ಯಂತ್ರೋಪಕರಣಗಳಿವೆ. ಕೆಮರಾ ಆ ಕೆಲಸ ಮಾಡುತ್ತದೆ. ಮಾತುಗಳ ವಿಚಾರದಲ್ಲಿ ಬರಿಯ ಅಷ್ಟೊಂದು ಕೆಲಸಕ್ಕೆ ಸಾಹಿತಿಯೂ ಬೇಡ, ಕಲಾವಿದನೂ ಬೇಡ. ಆದರೆ ಈ ರೀತಿಯಲ್ಲಿ ಅನುಕರಣೆ ಮಾಡುವುದಕ್ಕೆ ಕಲೆ ಎನ್ನುವುದಿಲ್ಲ. ವಾಸ್ತವಿಕ ಜಗತ್ತಿನಲ್ಲಿ ಬಾಳಿ, ಕೇಳಿ, ನೋಡಿ, ಮೂಸಿ, ಆಸ್ವಾದಿಸಿ, ಮುಟ್ಟಿ ತೂಗುವ ಮನುಷ್ಯ ತನ್ನದಾದ ಅನುಭವಗಳನ್ನು ಗಳಿಸಿ, ಯಾವುದೋ ಆಂತರಿಕ ಒತ್ತಡದಿಂದ ಪ್ರಕಟಿಸುವ ಬಗೆಯನ್ನು ನಾವು ಕಲೆ, ಸಾಹಿತ್ಯ ಅನ್ನುತ್ತೇವೆ". ಕಲಾಕೃತಿಯೊಂದರ ಅನನ್ಯತೆಯ ಬಗೆಗೆ ಅವರು ಗಾಢವಾಗಿ ಯೋಚಿಸುತ್ತಿದ್ದರು ಎಂಬುದಕ್ಕೆ ಮೇಲಿನ ಮಾತುಗಳೇ ಸಾಕ್ಷಿ.

ಹೀಗಾಗಿ ಶಿವರಾಮ ಕಾರಂತರ ಕೃತಿಗಳಲ್ಲಿ ಕಂಡು ಬರುವ 'ವಾಸ್ತವತಾವಾದ'ದ ಬಗ್ಗೆ ಬರೆವಾಗೆಲ್ಲ ನಾವು ತುಂಬ ಸರಳೀಕರಿಸಿ ಮಾತಾಡಬಾರದು. ವಾಸ್ತವವಾದದ ಮಿತಿಗಳನ್ನು ಸುಲಭವಾಗಿ ಮೀರಿ ಬಿಡುವ ನಾಟಕ ಮತ್ತು ಯಕ್ಷಗಾನಗಳಲ್ಲಿ ಕಾರಂತರು ವಿಶೇಷವಾಗಿ ತಮ್ಮನ್ನು ಯಾಕೆ ತೊಡಗಿಸಿಕೊಂಡರು? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಂಡರೆ ಕಾರಂತರ ವಾಸ್ತವವಾದೀ ಪರಂಪರೆಯ ನೆಲೆಗಳ ಕುರಿತು ನಮಗೆ ವಿಶೇಷ ಒಳನೋಟಗಳು ಲಭ್ಯವಾಗಬಹುದು. "ದೇವ-ದಾನವ ಪಾತ್ರಗಳು ಬಂದ ಮಾತ್ರಕ್ಕೆ ನಾಟಕ, ಯಕ್ಷಗಾನಗಳು ಅವಾಸ್ತವಿಕವಾಗುವುದಿಲ್ಲ" ಎಂಬ ಅವರ ಮಾತನ್ನು ನಾವು ಮರೆಯಬಾರದು. ಬಹುಶಃ ಕಾರಂತರ ಕಾದಂಬರಿಗಳಿಗೂ ಅವರು ಮಾಡಿದ ಯಕ್ಷಗಾನ ಪ್ರಯೋಗಗಳಿಗೂ ನಡುವೆ ಇರುವ ಸಂಬಂಧವನ್ನು ನಾವು ಇನ್ನಷ್ಟೇ

ಪರಿಶೀಲಿಸಬೇಕಾಗಿದೆ. ಅವರು ಬರೆದ 'ದೇವದೂತರು', 'ಸರಸಮ್ಮನ ಸಮಾಧಿ', 'ಮೈಮನಗಳ ಸುಳಿಯಲ್ಲಿ' ಕಾದಂಬರಿಗಳನ್ನು ನಾವು ಮತ್ತೆ ಪರಿಶೀಲನೆಗೆ ಒಡ್ಡಬೇಕಾಗಿದೆ.

ಒಟ್ಟಿನಿಂದ ಹೇಗೇ ನೋಡಿದರೂ ಕಾರಂತರು ಕನ್ನಡ ಭಾಷೆ ಸೃಜಿಸಿದ ಮಹಾ ವಿಸ್ಮಯದಂತೆ ತೋರುತ್ತಾರೆ. ಅವರ ಬಗೆಗಣ ಅಧ್ಯಯನವನ್ನು ನಾವೀಗ ಹೊಸದುಗೊಳಿಸಬೇಕಾದ ಅವಶ್ಯಕತೆಯಿದೆ. ಪಂಡಿತರನ್ನೂ ಪಾಮರರನ್ನು ಏಕಕಾಲಕ್ಕೆ ಮುಟ್ಟಬಲ್ಲಂಥ ಬರಹಗಳನ್ನು ಕೊಟ್ಟಂತ ಅವರು ಕನ್ನಡ ಸಂಸ್ಕೃತಿಯ ಆಳ ವಿಸ್ತಾರಗಳನ್ನು ಹೆಚ್ಚಿಸಿದ್ದಾರೆ.

(ದೆಹಲಿ ಕರ್ನಾಟಕ ಸಂಘದ 'ಅಭಿಮತ' ಪತ್ರಿಕೆಯಿಂದ)

ಶ್ರದ್ಧಾಂಜಲಿ

## ಡಾ|| ಶ್ರೀನಿವಾಸ ಹಾವನೂರ

ದಿನಾಂಕ 5-4-2010 ರಂದು, ಬಹುಮುಖಿ ಪ್ರತಿಭೆಯ ವಿದ್ವಾಂಸರಾದ ಡಾ|| ಶ್ರೀನಿವಾಸ ಹಾವನೂರರು ನಮ್ಮನ್ನಗಲಿದ್ದು ಕನ್ನಡಕ್ಕೆ ತುಂಬಲಾರದ ನಷ್ಟ. ಸೃಜನ ಶೀಲಚಿಂತಕರೂ, ದಾಸ ಸಾಹಿತ್ಯದ ಆಳವಾದ ಅಭ್ಯಾಸವನ್ನು ಮಾಡಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದ ಸಮಿತಿಯಲ್ಲಿ ಹಿರಿಯ ಸಂಪಾದಕರಾಗಿ ಕೆಲಸ ಮಾಡಿದ್ದ ಅವರು 15 ಸಾವಿರ ಕೀರ್ತನೆಗಳ ನಿರ್ದಿಷ್ಟ ವಿಷಯವನ್ನು ಗೊತ್ತುಪಡಿಸಿದ್ದು, ಅವನ್ನು ಕೀರ್ತನೆಯ ಪಲ್ಲವಿ, ರಚಿಸಿದ ದಾಸರ ಅಂಕಿತ ಮುಂತಾದ ವಿವರಗಳೊಂದಿಗೆ ಕಂಪ್ಯೂಟರಿಗೆ ಅಳವಡಿಸಿದ ಬೃಹತ್ ಯೋಜನೆ ಪೂರ್ಣಗೊಂಡಿದೆ. 19ನೇ ಶತಮಾನದ ಕನ್ನಡ ಸಾಹಿತ್ಯವನ್ನು ಕುರಿತಾದ ಸಂಶೋಧನೆಯನ್ನು ಹಾವನೂರರು ಕೈಗೊಂಡಾಗ ಆನುಷಂಗಿಕವಾಗಿ ಇಲ್ಲಿಯ ಪತ್ರಿಕೋದ್ಯಮದ ಇತಿಹಾಸದ ಕುರಿತು ಸಾಕಷ್ಟು ಸಂಶೋಧನೆ ಮಾಡಿ 'ಮಂಗಳೂರು ಸಮಾಚಾರ'ವು ಕನ್ನಡದ ಮೊತ್ತಮೊದಲ ಪತ್ರಿಕೆ ಎಂಬುದನ್ನು ಖಚಿತ ಪಡಿಸಿದರು. ಇಂತಹ ಮಹಾನುಭಾವರ ಅಮರ ಚೇತನಕ್ಕೆ ಹಣತೆ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

## ಪ್ರೊ. ಕಿ. ರಂ. ನಾಗರಾಜ್

ಕನ್ನಡದ ಅಪ್ರತಿಮ ವಿದ್ವಾಂಸರೂ, ಪ್ರಾಧ್ಯಾಪಕರೂ, ವಿಮರ್ಶಕರೂ, ಕಾವ್ಯಪ್ರೇಮಿಯೂ ಆಗಿದ್ದ ಪ್ರೊ. ಕಿ.ರಂ. ನಾಗರಾಜ (64) ಅವರು ದಿನಾಂಕ 7-8-2010 ರಂದು ಬೆಂಗಳೂರಿನ ಒಂದು ಸಾಹಿತ್ಯ ಸಭೆಯಲ್ಲಿ ಬೇಂದ್ರೆ ಕಾವ್ಯದ ಕುರಿತು ಉಪನ್ಯಾಸ ಮುಗಿಸಿ, ಕೆಲವೇ ನಿಮಿಷಗಳಲ್ಲಿ ಹಠಾತ್ತನೆ ನಿಧನರಾದರು.

ಕಾವ್ಯವಿಶ್ಲೇಷಣೆಯಲ್ಲಿ ಕಿ.ರಂ. ಅದ್ವಿತೀಯರಾಗಿದ್ದರು. ಅವರು ಬರೆದದ್ದು ತೀರಾ ಕಡಿಮೆ. ಆದರೆ ತಮ್ಮ ಪಾಂಡಿತ್ಯಪೂರ್ಣ ಉಪನ್ಯಾಸಗಳಿಂದ ಸಾವಿರಾರು ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿ ಹಾಗೂ ಕಾವ್ಯಪ್ರೇಮವನ್ನು ಜಾಗೃತಗೊಳಿಸಿ, ಬೆಳೆಸಿದರು. ಪಂಪನಿಂದ ಅಡಿಗರವರೆಗೆ ಕನ್ನಡದ ಸಮಗ್ರ ಸಾಹಿತ್ಯವನ್ನು ಹೃದ್ಗತಗೊಳಿಸಿಕೊಂಡಿದ್ದ ಅವರ ಕಾವ್ಯವಿಶ್ಲೇಷಣೆಯ ಆಳ, ಎತ್ತರ,

ಬಿತ್ತರಗಳನ್ನು ಕೇಳಿಯೇ ಸವಿಯಬೇಕು. ಅವರ ಪಾಂಡಿತ್ಯ ಮತ್ತು ವಿಮರ್ಶಾ ಪ್ರತಿಭೆ ಕೇವಲ ಮೌಖಿಕ ಮಾಧ್ಯಮಕ್ಕೆ ಸೀಮಿತವಾಗಿ ಹೋದುದು ಕನ್ನಡ ಸಾಹಿತ್ಯಕ್ಕಾದ ಬಹು ದೊಡ್ಡ ನಷ್ಟ. ಅವರ ನಿರ್ಗಮನದಿಂದ ಕನ್ನಡ ಸಾಹಿತ್ಯ ವಿಮರ್ಶಾ ಕ್ಷೇತ್ರ ಬಡವಾಗಿದೆ.

ಕಿ.ರಂ. ಅವರ ಚೇತನಕ್ಕೆ 'ಹಣತೆ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

## ಪಂಡಿತ ಪುಟ್ಟರಾಜ ಗವಾಯಿಗಳು

ಗದಗಿನ ವೀರೇಶ್ವರ ಪುಣ್ಯಾಶ್ರಮದ ಮುಖ್ಯಸ್ಥರಾಗಿದ್ದು, ಕನ್ನಡ ನಾಡಿನ ಸಂಗೀತ, ಸಾಹಿತ್ಯ, ರಂಗಭೂಮಿಗಳಿಗೆ ಅನನ್ಯ ಸೇವೆ ಸಲ್ಲಿಸಿದ್ದ ಪದ್ಮಭೂಷಣ ಡಾ. ಪುಟ್ಟರಾಜ ಗವಾಯಿಗಳು ದಿನಾಂಕ 17-9-2010ರಂದು ತಮ್ಮ 97ನೇ ವರ್ಷದಲ್ಲಿ ನಿಧನರಾದರು.

ಹುಟ್ಟಿದ ಆರು ತಿಂಗಳಲ್ಲೇ ದೃಷ್ಟಿ ಕಳೆದುಕೊಂಡಿದ್ದ ಅವರು ಗದಗಿನ ಪಂ. ಪಚಾಕ್ಷರಿ ಗವಾಯಿಗಳ ಪಟ್ಟ ಶಿಷ್ಯರಾಗಿ ಬೆಳೆದು ಸಂಗೀತದಲ್ಲಿ ಅಗಾಧ ಸಾಧನೆ ಮಾಡಿ ಉಭಯಗಾನ ವಿಶಾರದರೂ, ಬಹುವಾದ್ಯವಾದನ ನಿಪುಣರೂ ಆಗಿ ಅರಳಿದರು. ಕನ್ನಡ, ಹಿಂದೀ, ಸಂಸ್ಕೃತ ಭಾಷೆಗಳಲ್ಲಿ ಪರಿಣತರಾಗಿದ್ದ ಅವರು ಒಟ್ಟು 72 ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅನೇಕ ವೀರಶೈವ ಶರಣ ಶರಣೆಯರ ಕುರಿತ ಪುರಾಣಗಳೂ, ನಾಟಕಗಳೂ, ಕವನ, ವಚನಗಳೂ ಬ್ರೈಲ್ ಲಿಪಿಯಲ್ಲಿ ಬರೆದ ಪುಸ್ತಕಗಳೂ ಸೇರಿವೆ. ನೂರಾರು ಅಂಧ ಅನಾಥ ಬಾಲಕರು ಅವರ ಆಶ್ರಯ, ಮಾರ್ಗದರ್ಶನದಿಂದ ಸಂಗೀತದಲ್ಲಿ ಪರಿಣತರಾಗಿ ತಮ್ಮ ಬದುಕನ್ನು ಬೆಳಗಿಸಿಕೊಂಡಿದ್ದಾರೆ. ಸಂಗೀತ, ಸಾಹಿತ್ಯ, ಶಿಕ್ಷಣ, ಸಮಾಜಸೇವೆ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಅಮೋಘವಾದ ಸೇವೆಯನ್ನು ಇಷ್ಟು ದೀರ್ಘಕಾಲ ನಡೆಸಿದ ಪುಟ್ಟರಾಜ ಗವಾಯಿಗಳಿಗೆ ಸರಿಸಾಟಿ ಬೇರೆ ಇಲ್ಲ. ಅವರಿಗೆ ಪದ್ಮಭೂಷಣ, ಚೌಡಯ್ಯ, ಕನಕ-ಪುರಂದರ ನಾಡೋಜ, ಕಾಳಿದಾಸ ಸಮ್ಮಾನ್, ಮುಂತಾದ ಅನೇಕ ಪ್ರಶಸ್ತಿಗಳೂ, ಸನ್ಮಾನಗಳೂ ಸಂದಿವೆ. ಅವರಿಗೆ ಭಕ್ತರು ಮಾಡಿದ ತುಲಾಭಾರಗಳ ಸಂಖ್ಯೆಯೇ 2275 ಎಂದರೆ ಅವರು ಜನಸಮೂಹದ ಮೇಲೆ ಮಾಡಿದ ಪ್ರಭಾವ ಎಂಥದೆಂದು ಊಹಿಸಬಹುದು.

ಮಹಾನುಭಾವರಾದ ಪಂಡಿತ ಪುಟ್ಟರಾಜ ಗವಾಯಿಗಳ ಅಮರ ಚೇತನಕ್ಕೆ 'ಹಣತೆ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

# ಶಿವರಾಮ ಕಾರಂತ ವೇದಿಕೆಯ ವಾರ್ಷಿಕ ವರದಿ

ಸನ್ಮಾನ್ಯ ಅಧ್ಯಕ್ಷರೇ, ಗೌರವಾನ್ವಿತ ಸದಸ್ಯರೇ,

ಕನ್ನಡ ಸಾಹಿತ್ಯ, ಸಂಸ್ಕೃತಿ ಮತ್ತು ಭಾಷೆಗಳ ಸಂವರ್ಧನೆಯ ಮಹತ್ತಾದ ಗುರಿಯನ್ನು ಇಟ್ಟುಕೊಂಡು 1993ರ ಜನವರಿಯಲ್ಲಿ ಅಸ್ತಿತ್ವಕ್ಕೆ ಬಂದ ನಮ್ಮ ಸಂಸ್ಥೆಯ 2009-2010ನೆಯ ವರ್ಷದ ವರದಿಯನ್ನು ತಮ್ಮ ಮುಂದಿರಿಸಲು ನನಗೆ ಸಂತೋಷವಾಗುತ್ತಿದೆ.

**ಸದಸ್ಯತ್ವ :** ಈ ವರ್ಷ ನಮ್ಮ ಸಂಸ್ಥೆಗೆ ಹೊಸತಾಗಿ ನಾಲ್ವರು ಅಜೀವ ಸದಸ್ಯರಾಗಿಯೂ, 7 ಜನ ದಾನಿ ಸದಸ್ಯರಾಗಿದ್ದಾರೆ ಒಬ್ಬರು ಆ ಜೀವ ಸದಸ್ಯರು ದಾನಿ ಸದಸ್ಯರಾಗಿದ್ದಾರೆ. ಸಂಸ್ಥೆಯ ಸದಸ್ಯತ್ವದ ಬೆಳವಣಿಗೆ ತೃಪ್ತಿಕರವೆಂದು ಹೇಳುವಂತಿಲ್ಲ.

**ವರದಿ ವರ್ಷದ ಅಂತ್ಯದಲ್ಲಿ ನಮ್ಮ ಸದಸ್ಯತ್ವದ ಸಂಖ್ಯೆ ಹೀಗಿದೆ :-**

| | | 2009-2010 | 2008-09 (ಕಳೆದ ವರ್ಷ) |
|---|---|---|---|
| 1. ಅಜೀವ ಸದಸ್ಯರ ಸಂಖ್ಯೆ | - | 178 | 175 |
| 2. ದಾನಿ ಸದಸ್ಯರ ಸಂಖ್ಯೆ | - | 94 | 87 |
| 3. ಪೋಷಕ ಸದಸ್ಯತ್ವ | - | 12 | 12 |

ಎಲ್ಲಾ ಅಜೀವ ಸದಸ್ಯರು ಆದಷ್ಟು ಶೀಘ್ರದಲ್ಲಿ ರೂ. 750ನ್ನು ಸಲ್ಲಿಸಿ ದಾನಿಸದಸ್ಯರಾಗಿ ಸಂಸ್ಥೆಯ ಆರ್ಥಿಕ ಸ್ಥಿತಿಯನ್ನು ಬಲಪಡಿಸಬೇಕಾಗಿ ವಿನಂತಿ. ಪ್ರತಿಯೊಬ್ಬ ಸದಸ್ಯರು ನೂತನ ವರ್ಷದಲ್ಲಿ ಒಬ್ಬೊಬ್ಬರು ಹೊಸ ಸದಸ್ಯರನ್ನು ಸೇರ್ಪಡೆಗೊಳಿಸಿ ಸಂಸ್ಥೆಯ ಬೆಳವಣಿಗೆಗೆ ನೆರವಾಗಬೇಕೆಂದು ಕೇಳಿಕೊಳ್ಳುತ್ತೇನೆ.

ವರದಿ ವರ್ಷದಲ್ಲಿ ನಮ್ಮ ಸದಸ್ಯರುಗಳಾದ ಶ್ರೀಯುತ ಡಾ. ಎಸ್. ಲಕ್ಷ್ಮೀನಾರಾಯಣ ಮತ್ತು ಶ್ರೀ ಆರ್. ವಿಶ್ವಮೂರ್ತಿಯವರು ನಿಧನರಾಗಿರುವರೆಂದು ತಿಳಿಸಲು ದುಃಖವಾಗುತ್ತದೆ.

ವರದಿ ವರ್ಷದಲ್ಲಿ ನಮ್ಮ ಸಂಸ್ಥೆಯನ್ನು ಮುನ್ನಡೆಸಿದ ಪದಾಧಿಕಾರಿಗಳು ಹಾಗೂ ಕಾರ್ಯಕಾರೀ ಸಮಿತಿಯ ಸದಸ್ಯರು ಈ ಕೆಳಗಿನವರು:

| | | |
|---|---|---|
| 1. ಶ್ರೀಮತಿ ರಾಧಾ ರಾಮಸ್ವಾಮಿ | - | ಅಧ್ಯಕ್ಷರು |
| 2. ಶ್ರೀ ಎಸ್. ಆರ್. ವಿಜಯಶಂಕರ್ | - | ಉಪಾಧ್ಯಕ್ಷರು |
| 3. ಶ್ರೀ ಬಿ.ವಿ. ಕೆದಿಲಾಯ | - | ಉಪಾಧ್ಯಕ್ಷರು |
| 4. ಶ್ರೀ ಪಾ. ಚಂದ್ರಶೇಖರ ಚಡಗ | - | ಕಾರ್ಯದರ್ಶಿ |
| 5. ಶ್ರೀಮತಿ ಶಾಂತಕುಮಾರಿ | - | ಜೊತೆ ಕಾರ್ಯದರ್ಶಿ |
| 6. ಶ್ರೀ ಡಿ.ಎಚ್.ಎಂ. ವೀರಶೇಖರ ಸ್ವಾಮಿ | - | ಜೊತೆ ಕಾರ್ಯದರ್ಶಿ |
| 7. ಡಾ. ಆರ್. ಆರ್. ಪಾಂಗಾಳ್ | - | ಕೋಶಾಧಿಕಾರಿ |

### ಕಾರ್ಯಕಾರಿ ಸಮಿತಿಯ ಸದಸ್ಯರು

1. ಶ್ರೀ ಎಸ್. ಆರ್. ವಾರಂಬಳ್ಳಿ
2. ಶ್ರೀ ಸೀತಾರಾಮ ಭಟ್, ಪಿಎಚ್.ಡಿ
3. ಶ್ರೀಮತಿ ಚಿತ್ರಾ ವಿಠಲ್
4. ಶ್ರೀ ಜಿ.ಕೆ.ಎಲ್. ರಾಜನ್
5. ಶ್ರೀ ಬಿ. ಸದಾಶಿವ ರಾವ್
6. ಶ್ರೀ ಕೇಶವ ಮೂರ್ತಿ
7. ಶ್ರೀ ರಮೇಶ್ ಗೋಟ
8. ಶ್ರೀ ಎ. ಆರ್. ರಾಮಯ್ಯ

ಕಾರ್ಯಕಾರೀ ಸಮಿತಿಯು ಆಗಾಗ್ಗೆ ಸಭೆ ನಡೆಸಿ ಈ ವರ್ಷದ ಕಾರ್ಯಕ್ರಮಗಳನ್ನು ರೂಪಿಸಿತು. ವರದಿ ವರ್ಷದಲ್ಲಿ ಈ ಕೆಳಗಿನ ಕಾರ್ಯಕ್ರಮಗಳನ್ನು ನಡೆಸಿದ್ದೇವೆ.

| ಕ್ರ. | ದಿನಾಂಕ | ಕಾರ್ಯಕ್ರಮ | ಮುಖ್ಯ ಅತಿಥಿಗಳು | ಸ್ಥಳ | ಸಹಯೋಗ ತರಳಬಾಳು |
|---|---|---|---|---|---|
| 1 | 12.04.09 | ಮಳೆ ನೀರು ಕೊಯಿಲು ಮತ್ತು ಅಂತರ್ಜಲ ಮರು ಪೂರೈಕೆ ಕುರಿತು ಉಪನ್ಯಾಸ. ಪ್ರಾತ್ಯಕ್ಷಿಕೆ | ಶ್ರೀ ಡಿ. ಎಚ್. ಎಂ. ವೀರಶೇಖರಸ್ವಾಮಿ, ಎಂ. ಎಸ್.ಸಿ. ಹಿರಿಯ ವಿಜ್ಞಾನಿ ಭೂ ಭೌತ ವಿಜ್ಞಾನ ಇಲಾಖೆ | ತರಳಬಾಳು ಗ್ರಂಥಾಲಯ | ಕೇಂದ್ರ, ಲಿಟ್ಲ್ ವರ್ಲ್ಡ್ ಟ್ರಸ್ಟ್, ಲಿ.ನಾ.ಚ. ಸ್ಮಾರಕ ದತ್ತಿನಿಧಿ (ರಿ) |
| 2 | 21.6.09 | ಸಂಘದ ವಾರ್ಷಿಕ ಮಹಾಸಭೆ ಹಾಗೂ "ಆಫ್ರಿಕನ್ ಮಹಿಳಾ ಕಾವ್ಯದ ಅಭಿವ್ಯಕ್ತಿ ಕುರಿತು ಉಪನ್ಯಾಸ ಮತ್ತು ಕಿಂಕಿಣಿ ನಾಟ್ಯ ಶಾಲೆಯಿಂದ ಭರತ ನಾಟ್ಯ - ಶ್ರೀ ಯು. ಆರ್. ವೆಂಕಟೇಶ್ ಐಯ್ಯಂಗಾರ್ ಮತ್ತು ವೃಂದದವರಿಂದ | ಶ್ರೀಮತಿ ಎಂ. ಆರ್. ಕಮಲ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ ಮತ್ತು ಆರ್.ಟಿ. ನಗರ ಸಾಂಸ್ಕೃತಿಕ ಸಂಘ |

| | | | | | |
|---|---|---|---|---|---|
| 3. | 4.07.09 | ಪಾ. ವೆಂ. ಅವರ ಸಾಹಿತ್ಯದಲ್ಲಿ ಹಾಸ್ಯ | ಶ್ರೀಮತಿ ನಳಿನಿ ಮಯ್ಯ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 4. | 30.8.09 | ಲೋಕಮಾನ್ಯ ಬಾಲಗಂಗಾಧರ ತಿಲಕ್ ವ್ಯಕ್ತಿ ಪರಿಚಯ | ಶ್ರೀ ಮಂಜುನಾಥಸ್ವಾಮಿ ಕಾಲೇಜು ಹೆಬ್ಬಾಳ | ಆದರ್ಶ | ಮಂಥನ - |
| 5. | 13.09.09 | ರಾಮಾಯಣಗಳಲ್ಲಿ ಕೈಕೇಯಿಯ ಪಾತ್ರ | ಶ್ರೀಮತಿ ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ | -"- | - |
| 6. | 10.10.09 | ಶಿವರಾಮ ಕಾರಂತರ 108ನೆಯ ಹುಟ್ಟುಹಬ್ಬ | ಎಂ. ನಾಗೇಂದ್ರ ಸ್ವಾಮಿ, ಡಾ.ಪಿ.ಎಸ್.ಗೀತಾ, ಕೋಟೇಶ್ವರ ಸೂರ್ಯನಾರಾಯಣ ರಾವ್ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ ಲಿಟ್ಲ್ ವರ್ಲ್ಡ್ ಟ್ರಸ್ಟ್ |
| 7. | 21.11.09 | ನಾಟಕ : ಆದದ್ದೆಲ್ಲಾ ಒಳಿತೇ ? | ಕ್ರಿಯೇಟಿವ್ ಥಿಯೇಟರ್ | ತರಳಬಾಳು ಕೇಂದ್ರ | ತರಳಬಾಳು ಕೇಂದ್ರ |
| 8. | 13.12.09 | ಎಂ.ವಿ. ಸೀತಾರಾಮಯ್ಯ ನವರ ಜನ್ಮಶತಮಾನೋತ್ಸವ | ಡಾ. ಪಿ.ವಿ. ನಾರಾಯಣ, ಎಸ್.ವಿ. ಶ್ರೀನಿವಾಸರಾವ್, ನಂ. ನಂಜಪ್ಪ, | ತರಳಬಾಳು ಗ್ರಂಥಾಲಯ | ಎಂ.ವಿ.ಸೀ. ಶತಮಾನೋತ್ಸವ ಸಮಿತಿ ತರಳಬಾಳು ಕೇಂದ್ರ |

| | | | | | |
|---|---|---|---|---|---|
| | | ಮತ್ತು ಪ್ರಾಚೀನ ಹಸ್ತಪ್ರತಿ ಪ್ರದರ್ಶನ | ಶಾಂತಾಕುಮಾರಿ | | |
| 9. | 24.01.10 | ಕವಿ ಮುದ್ದಣನ ಜನ್ಮ ದಿನೋತ್ಸವ, ಸಂಕ್ರಾತಿ ಸಾಹಿತ್ಯೋತ್ಸವ ಶ್ರೀ ವಿನಾಯಕ ಕವಿಗೋಷ್ಠಿ, ಕನ್ನಡ ಸಿರಿ ಪ್ರಶಸ್ತಿ ಪ್ರಧಾನ ಸಮಾರಂಭ | ನರಹಳ್ಳಿ ಬಾಲಸುಬ್ರಹ್ಮಣ್ಯ, | ಶ್ರೀ ವಿನಾಯಕ ದೇವಸ್ಥಾನ ಸಾಂಸ್ಕೃತಿಕ ಸಂಘ ಕೇಂದ್ರ | ಹೆಬ್ಬಾಳ ಕನ್ನಡ ಸಾಹಿತ್ಯ ಪರಿಷತ್ತು |
| 10. | 14.2.10 | "ಹರಿದಾಸರ ಸಂದೇಶ ಇಂದಿಗೂ ಪ್ರಸ್ತುತ" ಉಪನ್ಯಾಸ | ಶ್ರೀಮತಿ ಡಾ. ಅನಸೂಯಾ ದೇವಿ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 11 | 27.3.10 | ಶ್ರೀ ಎ.ಆರ್. ಕೃಷ್ಣಾಶಾಸ್ತ್ರಿಗಳ ಸ್ಮಾರಕ ದತ್ತಿನಿಧಿ ಉಪನ್ಯಾಸ ಮತ್ತು ಡಾ. ಎಚ್. ಎಸ್. ವೆಂಕಟೇಶ | ಜಿ. ವೆಂಕಟಸುಬ್ಬಯ್ಯ, ಶ್ರೀ ಸಿ.ಎನ್. ರಾಮಚಂದ್ರನ್ ಮತ್ತು ಡಾ. ಎಚ್. ಎಸ್. ವೆಂಕಟೇಶ ಮೂರ್ತಿ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |

| | | | | | |
|---|---|---|---|---|---|
| | | ಮೂರ್ತಿಯವರಿಗೆ ಸನ್ಮಾನ ಕಾರ್ಯಕ್ರಮ ಎಚ್‌ಸ್ವಿ ಅವರ ಭಾವಗೀತೆಗಳ ಗಾಯನ - ಕುಮಾರಿ ವಿದ್ಯಾಮೂರ್ತಿ ಮತ್ತು ಕುಮಾರಿ ವರ್ಷಾ ಸುರೇಶ್ | | | |

ಸಾಸ್ತಾನ ಶಾಖೆಯ ಕಾರ್ಯಕ್ರಮಗಳು

| | | | | | |
|---|---|---|---|---|---|
| 1. | 26.4.09 | ಶಿವರಾಮ ಕಾರಂತ ರಂಗಸ್ಥಳದ ಎರಡನೆಯ ಹಂತದ ಉದ್ಘಾಟನೆ - ವ್ಯಕ್ತಿ ವಿಕಸನದ ಶಿಬಿರ ಮತ್ತು ರಮಾದೇವಿ ಚಡಗ ಸ್ಮಾರಕ ಸಭಾಗೃಹದ ಉದ್ಘಾಟನೆ ಸಮಾರಂಭ | ಸ್ವಾಮಿ ಜಗದಾತ್ಮಾನಂದಜೀ ಡಾ. ಭರತಚಂದ್ರ ಶ್ರೀ ಅಂಬಾತನಯ ಮುದ್ರಾಡಿ ಪ್ರೊ. ಜಯಪ್ರಕಾಶ ಮಾವಿನಕುಳಿ | ಚಡಗರ ಅಗ್ರಹಾರ, ಪಾಂಡೇಶ್ವರ ಗ್ರಾಮ, ಉಡುಪಿ ಜಿಲ್ಲೆ | ಚಂದ್ರವಾದಿ & ಎಸೋಸಿಯೇಟ್ಸ್, ಲಯನ್ಸ್ ಕ್ಲಬ್, ಬ್ರಹ್ಮಾವರ - ಬಾರ್ಕೂರು, ರೋಟರಿ ಕ್ಲಬ್ ಹಂಗಾರಕಟ್ಟೆ - |

| | | | | | |
|---|---|---|---|---|---|
| | | | | | ಸಾಸ್ತಾನ,<br>ಇನ್ನರ್ ವ್ಹೀಲ್<br>ಕ್ಲಬ್ ಕೋಟ<br>- ಸಾಲಿಗ್ರಾಮ |
| 2 | 31.10.09 | ಶಿವರಾಮ ಕಾರಂತರ 108ನೆ ಹುಟ್ಟುಹಬ್ಬ ಮತ್ತು ಕನ್ನಡ ರಾಜ್ಯೋತ್ಸವ - ಈ ಸಂದರ್ಭದಲ್ಲಿ<br><br>ತಾಲ್ಲೂಕು ಮಟ್ಟದ ಲೇಖನ, ಭಾಷಣ ಮತ್ತು ರಸಪ್ರಶ್ನೆ ಕಾರ್ಯಕ್ರಮಗಳನ್ನು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಏರ್ಪಡಿಸಲಾಗಿತ್ತು. | ಶ್ರೀಮತಿ ಹೇಮಲತಾ ಐ.ಎ.ಎಸ್, ಉಡುಪಿ ಜಿಲ್ಲಾಧಿಕಾರಿಗಳು,<br>ಶ್ರೀ ಕೋಟ ಶ್ರೀನಿವಾಸ ಪೂಜಾರಿ,<br>ವಿಧಾನ ಪರಿಷತ್ತು ಸದಸ್ಯರು,<br>ಶ್ರೀ ಎ.ಎಸ್.ಎನ್. ಹೆಬ್ಬಾರ, ಖ್ಯಾತ ವಕೀಲರು ಹಾಗೂ ಸಾಹಿತಿ ಕುಂದಾಪುರ<br>ಗಮಕ ಸಂವಾದ : ಕರ್ಣಬೇಧ<br>ಸರ್ವಶ್ರೀ :-<br>1. ಎಚ್.ಶ್ರೀಧರ ಹಂದೆ<br>2. ನೀಲಾವರ | ಚೇತನಾ ಪ್ರೌಢಶಾಲೆ, ಹಂಗಾರಕಟ್ಟೆ | ಚೇತನಾ ಪ್ರೌಢಶಾಲೆ.<br>1 ಲಯನ್ಸ್ ಕ್ಲಬ್<br>2. ರೋಟರಿ ಕ್ಲಬ್<br><br>3. ಇನ್ನರ್ ವ್ಹೀಲ್ ಕ್ಲಬ್ |

| | | | | | |
|---|---|---|---|---|---|
| | | ಮತ್ತು ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನ ವಿತರಣೆ | ಲಕ್ಷ್ಮೀನಾರಾಯಣ ರಾವ್<br>3. ರಾಮಚಂದ್ರ ಐತಾಳ | | |

ಎಂದಿನಂತೆ ಭಾಗವಹಿಸಿದ ಪ್ರೇಕ್ಷಕರಿಂದಲೂ, ಬಂದ ಅತಿಥಿಗಳಿಂದಲೂ ನಮ್ಮ ಕಾರ್ಯಕ್ರಮ ಹಾಗೂ ಪ್ರಬುದ್ಧ ಪ್ರೇಕ್ಷಕರ ಬಗ್ಗೆ ಮೆಚ್ಚುಗೆ ವ್ಯಕ್ತವಾಗಿದೆ.

ಈ ವರ್ಷ ಹಣತೆಯ 2 ಸಂಚಿಕೆಗಳು ಮಾತ್ರ ಪ್ರಕಟಗೊಂಡಿವೆ. ಇದಕ್ಕಾಗಿ ಶ್ರಮಿಸಿದ ಗೌರವ ಸಂಪಾದಕರಾದ ಶ್ರೀ ಬಿ.ವಿ. ಕೆದಿಲಾಯರಿಗೂ, ಲೇಖನಗಳನ್ನು ಕೊಟ್ಟು ಸಹಕರಿಸಿದ ಲೇಖಕರಿಗೂ, ಜಾಹೀರಾತುದಾರರಿಗೂ ನಾವು ಕೃತಜ್ಞತೆಯನ್ನು ಸಮರ್ಪಿಸುತ್ತೇವೆ. ಹಣತೆಗೆ ಬೇಕಾದ ಲೇಖನಗಳನ್ನು ಮತ್ತು ಜಾಹೀರಾತುಗಳನ್ನು ಸಂಪಾದಿಸುವುದು ಕಠಿಣವಾಗುತ್ತಿರುವುದರಿಂದ ಈಗ ಅನಿಯತಕಾಲಿಕವಾಗಿ ಹೊರಬರುತ್ತಿದೆ.

ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ನಮ್ಮ ಸಂಸ್ಥೆಯ ಲೆಕ್ಕ ಪತ್ರವನ್ನು ಪರಿಶೋಧಿಸಿದ ಶ್ರೀ ಶರತಚಂದ್ರ, ಚಾರ್ಟರ್ಡ್ ಅಕೌಂಟೆಂಟ್ ಬೆಂಗಳೂರು ಇವರಿಗೆ ನಮ್ಮ ಕೃತಜ್ಞತೆಗಳು.

ನಮ್ಮ ಸಂಸ್ಥೆಯ ಕಾರ್ಯಕ್ರಮಗಳನ್ನು ನಡೆಸಲು ಜಾಗವನ್ನು ಒದಗಿಸಿದ ತರಳಬಾಳು ಕೇಂದ್ರದ ಡಾ. ಶಿವಮೂರ್ತಿ ಶಿವಾಚಾರ್ಯ ಬೃಹನ್ಮಠ, ಸಿರಿಗೆರೆ ಇವರಿಗೂ, ಇದರ ಬೆಂಗಳೂರು ಶಾಖೆಯ ಕಾರ್ಯದರ್ಶಿಗಳಾದ ಡಾ. ಎಸ್. ಸಿದ್ಧಯ್ಯನವರಿಗೂ ಮತ್ತು ಇತರ ಸಿಬ್ಬಂದಿ ವರ್ಗಕ್ಕೂ ಹಾಗೂ ಆದರ್ಶ ಕಾಲೇಜಿನ ಆಡಳಿತವರ್ಗಕ್ಕೂ ನಮ್ಮ ಅನಂತಾನಂತ ಕೃತಜ್ಞತೆಗಳು.

ನಮ್ಮ ಸಂಸ್ಥೆ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು ಜನ್ಮ ತಾಳಿತ್ತು. ಶಿವರಾಮ ಕಾರಂತರು ಹಾಗೂ ಇತರ ಶ್ರೇಷ್ಠ ಸಾಹಿತಿಗಳು ಪ್ರತಿಪಾದಿಸಿದ ಮೌಲ್ಯಗಳನ್ನು ಮೈಗೂಡಿಸಿಕೊಂಡು ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ವಲಯಕ್ಕೆ ನಮ್ಮಿಂದಾದ ಕಾಣಿಕೆಯನ್ನು ಸಲ್ಲಿಸುವ ಗುರಿ

ಹೊತ್ತು ಕಳೆದ 18 ವರ್ಷಗಳಿಂದ ಶ್ರಮಿಸುತ್ತಿರುವ ನಮಗೆ ಆಗಾಗ್ಗೆ ನಿರಾಸೆಯು ಕಾಡುತ್ತಿದ್ದರೂ ನಿರಾಸೆಯನ್ನು ಹೊಡೆದೋಡಿಸಿ ನಮ್ಮ ಪ್ರಯತ್ನಗಳನ್ನು ಮುಂದುವರಿಸುತಿದ್ದೇವೆ. ಬೆಂಗಳೂರಿನ ರವೀಂದ್ರನಾಥ ಟಾಗೋರ್ ನಗರ ಬಡಾವಣೆಯಲ್ಲಿ ತರಳಬಾಳು ಜಗದ್ಗುರುಗಳ ಆಶೀರ್ವಾದದೊಂದಿಗೆ ತರಳಬಾಳು ಗ್ರಂಥಾಲಯದಲ್ಲಿ ಒಂದು ಸ್ನಾತಕೋತ್ತರ ಅಧ್ಯಯನ ಕೇಂದ್ರವನ್ನು ಆರಂಭಿಸುವ ದಿಸೆಯಲ್ಲಿ ಮಹಾಸಭೆಯು ಆರಿಸುವ ಹೊಸ ಕಾರ್ಯಕಾರೀ ಸಮಿತಿಯು ಉದ್ಯುಕ್ತವಾಗಲಿ ಎಂದು ಹಾರೈಸಿ, ಈ ದಿಸೆಯಲ್ಲಿ ನಿಮ್ಮೆಲ್ಲರ ಸಹಕಾರವನ್ನು ಕೋರಿ ಈ ವರದಿಯನ್ನು ಮುಗಿಸುತ್ತಿದ್ದೇನೆ.

ಇಂತು,

**ಪ್ರಾ. ಚಂದ್ರಶೇಖರ ಚಡಗ**

ಕಾರ್ಯದರ್ಶಿ

11.07.2010

# ಹನಿಗವನಗಳು

ಎನ್. ನಾಗ

**ಮಹಾಪೂಜೆ**
ನಸುಕಿನಲಿ ಎದ್ದು
ನರೆಹೊರೆಯ ಹೂ ಕದ್ದು
ದೇವರಿಗಿರಿಸಿ ಬಿದ್ದು
ಮಾಡುವರೋ ಗಂಟೆಯ ಸದ್ದು !

**ಬಾಡಿಗೆ ಬಾಕಿ**
ಬಾಡಿಗೆದಾರ ಹಾಯಾಗಿ
ಹಾಡುತ್ತಿದ್ದರು ಖುಷಿಯಾಗಿ
ಅಲ್ಲಿರುವುದು ನಮ್ಮನೆ
ಇಲ್ಲಿರುವುದು ಸುಮ್ಮನೆ

**ಲಕ್ಷ್ಮಣ ರೇಖೆ**
ದಾಟುವುದಿಲ್ಲ ನನ್ನಾಕೆ
ನಾ ಹಾಕಿದ ರೇಖೆ
ಕಷ್ಟವೇಕೆ ಎನ್ನುವಳು
ತುಳಿದೇ ಹೋಗುವಳು

**ಡಯಾಬಿಟೀಸ್**
ಗೊಣಗುವಿಯೇಕೆ ಕಾಫಿ ಕಹಿ ಎಂದು
ನೀ ನಕ್ಕರೆ ಅದೇ ಸಕ್ಕರೆ
ನಗು ನಗುತಾ ಕುಡಿಯುವುದು
ತಾನೆ ಎಂದೆಂದೂ

**ನೈಟ್ ಬಸ್**
ಬಸ್ ಹತ್ತುವಾಗ
ಸುಸ್ವಾಗತ
ಬಸ್ ಚಲಿಸುವಾಗ
ಸುಸ್ತು ಆಗತ !

**ಕಳ್ಳ**
ಮೆಲ್ಲ ಮೆಲ್ಲನೆ ಬಂದು
ಗಲ್ಲಾಕೆ
ಕೈಯ ಕೊಟ್ಟು
ನಿಲ್ಲದೆ ಓಡಿ ಪೋದ

**ಮಧ್ಯ ವಯಸ್ಸು**
ಸೋಲ ಸಾಲ್
ರಸನಿಮಿಷಗಳು
ತಿರುವು ಮುರುವಾಗಿ
ಸಾಲ ಸೋಲಗಳಾಗಿವೆ

**ಬೆಳಗು**
ನೂತನ ವಧುವಿಗೆ ಅಮ್ಮನ ಆದೇಶ
ಸೇರಿದ ಮನೆಯನ್ನು ನಿರಂತರವಾಗಿ ಬೆಳಗು
ಅತ್ತೆಯ ಬಯಕೆಯೂ ಅದೇ ಆಗಿದ್ದು
ಬೀಳುತ್ತಿದ್ದವು ಹತ್ತಾರು ಪಾತ್ರೆ ಕಡಾಯಿ

**ಆಧುನಿಕ ಮನುಷ್ಯ**

ನೊಣಮೀಸೆಯ ಹುಳುಹೆಜ್ಜೆಯ
ಗಣಿಸುವ ವಿದ್ಯೆಯ ಬಲ್ಲ.
ತನ್ನಾತ್ಮವ ತಾನರಿಯುವ
ಸಾಧನೆಯೊಂದನು ಒಲ್ಲ |

- ಕುವೆಂಪು

# ಉಚಿತ ಸೇವೆಗಳು

ಆಸ್ಪತ್ರೆಗಳಲ್ಲಿ ನೆರವು ಬೇಕಾಗಿದ್ದಲ್ಲಿ
ಈ ಕೆಳಕಂಡವರನ್ನು ಸಂಪರ್ಕಿಸಿ
ರಾಮಸ್ವಾಮಿ (ಸ್ವಯಂ ಸೇವಕ)
ದೂರವಾಣಿ : 99459 73585

ಯಾವುದೇ ರೀತಿಯ ಸಮಸ್ಯೆಗಳಿಗೆ
ಆಪ್ತಸಮಾಲೋಚನೆ (ಕೌನ್ಸಿಲಿಂಗ್) ಯ
ನೆರವು ಸೌಲಭ್ಯ, ವಿಶ್ವಾಸ ಮತ್ತು ಗೌಪ್ಯದಿಂದ ಕೂಡಿದ್ದು,
ಎಲ್ಲಾ ಭಾಷೆಗಳಲ್ಲೂ ನಡೆಸಿಕೊಡುತ್ತಾರೆ.
ರಾಮಸ್ವಾಮಿ (ಕೌನ್ಸೆಲರ್)
ದೂರವಾಣಿ : 9945973585

10ನೇ ತರಗತಿ, ಪಿಯುಸಿ I, ಪಿಯುಸಿ II ನೇ
(ಐ.ಸಿ.ಎಸ್.ಸಿ., ಸಿ.ಬಿ.ಎಸ್.ಸಿ. ಸ್ಟೇಟ್ ಬೋರ್ಡ್)
ತರಗತಿಗಳಿಗೆ ಮ್ಯಾತ್‌ಮ್ಯಾಟಿಕ್ಸ್‌ನಲ್ಲಿ (ಗಣಿತ)
ಉಚಿತ ಶಿಕ್ಷಣ ನೀಡಲಾಗುತ್ತದೆ.
ಸಂಪರ್ಕಿಸಿ ಸುಧಾ ರಾಮಸ್ವಾಮಿ
ದೂರವಾಣಿ : 99459 73585

